# ಕ್ಷೇಮೇಂದ್ರ ಕವಿ

## ಸೂಕ್ತಿಗಳು



ಡಾ॥ ಬಿ.ಎಸ್. ರಾಮಕೃಷ್ಣರಾವ್

# ಕ್ಷೇಮೇಂದ್ರ ಕವಿ ಸೂಕ್ತಿಗಳು

ಸಂಗ್ರಹ ಮತ್ತು ಅನುವಾದ

**ಡಾ|| ಬಿ. ಎಸ್. ರಾಮಕೃಷ್ಣರಾವ್**

**ಲಲಿತಾ ಪ್ರಕಾಶನ**

107/1, 2ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಬಡಾವಣೆ

ಹನುಮಂತನಗರ, ಬೆಂಗಳೂರು – 19

**KSHEMENDRA KAVI SOOKTIGALU :** A collection of proverbial statements from the works of Kshemendra, alphabetically arranged and translated into Kannada by **Dr. B. S. Ramakrishna Rao,** Professor of Sanskrit, Surana College, Basavanagudi, Bangalore-4.

First Edition : July 2001

Pages : 100

Price : **Rs. 35/-**



Published by :
**LALITHA PRAKASHANA**
107/1, 2nd Main, Mount Joy Extension,
Hanumanthanagar, BANGALORE-560 019.
Ph. : 6525516 (O), 6529322

Printed at :
**PARIMALA MUDRANALAYA**
Hanumanthanagar, Bangalore-19
Ph. : 6525516

# ಮೊದಲ ಮಾತು

ಸಂಸ್ಕೃತ ಸಾಹಿತ್ಯವೆಂಬ ಆಗಸದ ಅಸಂಖ್ಯಾತ ಜ್ವಲಂತ ನಕ್ಷತ್ರಗಳಲ್ಲಿ ಕ್ಷೇಮೇಂದ್ರನೂ ಒಬ್ಬ. ಕವಿಯಾಗಿ, ವಿಮರ್ಶಕನಾಗಿ, ಅಲಂಕಾರ ಶಾಸ್ತ್ರಜ್ಞನಾಗಿ ಮತ್ತು ಸಂಗ್ರಾಹಕನಾಗಿ ಇವನಷ್ಟು ವ್ಯಾಪಕವಾಗಿ ಲೇಖನಿಯನ್ನು ಬಳಸಿಕೊಂಡವರು ಸಂಸ್ಕೃತದಲ್ಲಿಯೂ ವಿರಳ. ಔಚಿತ್ಯ ವಿಚಾರ ಚರ್ಚಾ, ರಾಜಾವಲೀ, ಅಮೃತ ತರಂಗ, ಕನಕಜಾನಕೀ, ದಶಾವತಾರ ಚರಿತ, ನೀತಿಕಲ್ಪತರು, ಶಶಿವಂಶ ಮಹಾಕಾವ್ಯ, ಚಿತ್ರಭಾರತ, ಕವಿಕಂಠಾಭರಣ, ಕಲಾವಿಲಾಸ, ದೇಶೋಪದೇಶ, ಸೇವ್ಯ ಸೇವಕೋಪದೇಶ, ಚಾರುಚರ್ಯಾ, ಚತುರ್ವರ್ಗಸಂಗ್ರಹ, ನೀತಿಲತಾ, ಲಾವಣ್ಯವತೀ..... ಇತ್ಯಾದಿಯಾಗಿ ನಾನಾ ವಿಷಯಗಳನ್ನು ಕುರಿತು ಅಪಾರ ಸಾಹಿತ್ಯವನ್ನು ಸೃಜಿಸಿರುವ ಇವನಿಗೆ 'ವ್ಯಾಸದಾಸ'ನೆಂಬ ಬಿರುದೂ ಇತ್ತು. ಕಾಶ್ಮೀರದ ಅರಸನಾಗಿದ್ದ ಶ್ರೀ ಅನಂತಭೂಪಾಲನ ಆಸ್ಥಾನ ಕವಿಯಾಗಿದ್ದ ಇವನ ಕಾಲ ಕ್ರಿ.ಶ. ಹತ್ತನೆಯ ಶತಮಾನದ ಉತ್ತರಾರ್ಧವೆನ್ನಬಹುದು.

ಕ್ಷೇಮೇಂದ್ರನ ಸಮಗ್ರ ಸಾಹಿತ್ಯವನ್ನು ಅವಲೋಕಿಸಿದಾಗ ಅದರಲ್ಲಿ ಸಂಸ್ಕೃತದ ಮೂರು ಪ್ರಮುಖ ಉಪಜೀವ್ಯ ಕಾವ್ಯಗಳಾದ ರಾಮಾಯಣ, ಮಹಾಭಾರತ ಮತ್ತು ಬೃಹತ್ಕಥೆಗಳನ್ನು ಆಧರಿಸಿ ವಿರಚಿತವಾಗಿರುವ ಮೂರು ಸ್ವತಂತ್ರ ಸಂಗ್ರಹ ಗ್ರಂಥಗಳು ನಮ್ಮ ಗಮನವನ್ನು ಸೆಳೆಯುತ್ತವೆ. ರಾಮಾಯಣ ಮಂಜರೀ, ಭಾರತ ಮಂಜರೀ ಮತ್ತು ಬೃಹತ್ಕಥಾ ಮಂಜರಿಯೆಂಬ ಈ ಮೂರು ಗ್ರಂಥಗಳು ಕ್ಷೇಮೇಂದ್ರನ ವಿಶಿಷ್ಟ ಕೊಡುಗೆಗಳಾಗಿವೆ. ಇವುಗಳಲ್ಲಿ ಕವಿಯು ಮೂಲಕ್ಕೆ ಚ್ಯುತಿಬಾರದಂತೆ ಕಥೆಯನ್ನು ಅತ್ಯಂತ ವಿವೇಚನೆ ವಿಚಕ್ಷಣತೆಗಳಿಂದ ಸರಳವಾಗಿ ಮತ್ತು ಸುಂದರವಾಗಿ ಸಂಗ್ರಹಿಸಿದ್ದಾನೆ.

ಪೈಶಾಚೀ ಭಾಷೆಯಲ್ಲಿ ರಚಿತವಾಗಿತ್ತೆಂದು ನಂಬಲಾಗಿರುವ ಗುಣಾಢ್ಯನ ಬೃಹತ್ಕಥೆ, ವಾಲ್ಮೀಕಿಯಿಂದ ರಚಿತವಾದ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳ, ರಾಮಾಯಣ ಮತ್ತು ಲಕ್ಷ ಸಂಖ್ಯೆಯನ್ನೂ ಮೀರಿರುವ ಹರಿವಂಶ ಸಹಿತವಾದ

ವ್ಯಾಸಭಾರತ ಇವನ್ನು ಆಮೂಲಾಗ್ರವಾಗಿ ಓದಿ ಜೀರ್ಣಿಸಿಕೊಳ್ಳುವುದು ಸುಲಭದ ಮಾತಲ್ಲ. ಈ ಗ್ರಂಥಗಳ ಸಾರವನ್ನು ಸುಮಾರು ಐದು ಸಾವಿರದಿಂದ ಏಳೂವರೆ ಸಾವಿರ ಶ್ಲೋಕಗಳಷ್ಟರ ಪರಿಮಿತಿಯಲ್ಲಿ ಭಟ್ಟಿ ಇಳಿಸಿರುವ ಕ್ಷೇಮೇಂದ್ರನು ಓದುಗರಿಗೆ ಮಹೋಪಕಾರ ಮಾಡಿದ್ದಾನೆ.

ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಬೋಧಿಸಿದ ಎರಡು ದಶಕಗಳ ಅವಧಿಯಲ್ಲಿಯೂ ನನಗೆ ಈ ಮೂರು ಗ್ರಂಥಗಳನ್ನು ಓದುವ ಅವಕಾಶ ವ್ಯವಧಾನಗಳು ಉಂಟಾಗಿರಲಿಲ್ಲ. ಬಸವನಗುಡಿ ನ್ಯಾಷನಲ್ ಕಾಲೇಜಿನಿಂದ ಸ್ವೇಚ್ಛಾ ನಿವೃತ್ತಿ ಪಡೆದು, ಮೆಕ್ಸಿಕೋ ನೆಪದಲ್ಲಿ ಭೂಪ್ರದಕ್ಷಿಣೆ ಮಾಡಿ, ಮುಂಬಯಿಯ ಭಾರತೀಯ ವಿದ್ಯಾಭವನದಲ್ಲಿ ವಿಶ್ರಾಂತ ಜೀವನದ ಉದ್ಯೋಗವನ್ನು ಅನುಭವಿಸುತ್ತಿರುವಾಗ ಕ್ಷೇಮೇಂದ್ರನ ಮೂರು ಮಂಜರಿಗಳನ್ನು ಓದುವ ಮುಹೂರ್ತವು ಪ್ರಾಪ್ತವಾಯಿತು. ಓದಓದುತ್ತಲೇ ಅಭ್ಯಾಸ ಬಲದಿಂದಾಗಿ ಈ ಗ್ರಂಥಗಳಲ್ಲಿನ ಲೋಕೋಕ್ತಿರೂಪದ ಸೂಕ್ತಿಗಳನ್ನು ಗುರುತು ಮಾಡುತ್ತ ಬಂದ ನಾನು ಕೊಚ್ಚಿಯ ಚಿನ್ಮಯ ಅಂತಾರಾಷ್ಟ್ರೀಯ ಕೇಂದ್ರದಲ್ಲಿದ್ದಾಗ ಅವನ್ನೆಲ್ಲ ಕ್ರೋಡೀಕರಿಸಿ ಅಕಾರಾದಿ ಕ್ರಮದಲ್ಲಿ ಜೋಡಿಸಿ ಇಟ್ಟುಕೊಂಡೆ. 'ಪುನರಾಯಾನ್....' ಎಂಬಂತೆ ಬಿ. ಟು ಬಿ. (Back to Bangalore) ಆಗಿ ಬೆಂಗಳೂರು ನಿವಾಸಿಯಾದ ಮೇಲೆ ಸನ್ಮಾನ್ಯ ಶ್ರೀ ಕೆ.ಚಿದಂಬರಯ್ಯನವರ ಒತ್ತಾಸೆಯಿಂದಾಗಿ ಅಕಾರಾದಿ ಕ್ರಮದಲ್ಲಿ ಅನುವಾದ ಸಹಿತ ನೀಡಲಾಗಿರುವ ಆರುನೂರೈವತ್ತರಷ್ಟು ಲೋಕೋಕ್ತಿಗಳ ಈ ಕಿರುಗ್ರಂಥವು ನಿರ್ಮಾಣವಾಗಿ ಇದೀಗ ಬೆಳಕು ಕಾಣುತ್ತಿದೆ.

ಮುಂಬಯಿಯ ನಿರ್ಣಯ ಸಾಗರ ಮುದ್ರಣಾಲಯದ ಮರುಮುದ್ರಣಗಳಾದ ವಾರಾಣಸಿಯ ಕೃಷ್ಣದಾಸ ಅಕಾಡೆಮಿಯ ರಾಮಾಯಣ ಮಂಜರೀ, ದೆಹಲಿಯ ಮೋತೀಲಾಲ ಬನಾರಸೀದಾಸ್ ಅವರ ಭಾರತ ಮಂಜರೀ ಹಾಗೂ ನವದೆಹಲಿಯ ಮೆಹರ್‌ಚಂದ ಲಛಮನದಾಸರ ಬೃಹತ್ಕಥಾ ಮಂಜರೀ ಇವು ನಾನು ಬಳಸಿಕೊಂಡಿರುವ ಗ್ರಂಥಗಳಾಗಿವೆ. ಈ ಗ್ರಂಥಗಳಲ್ಲಿ ಮತ್ತು ಕ್ಷೇಮೇಂದ್ರನ ಇನ್ನಿತರ ಗ್ರಂಥಗಳಲ್ಲಿ ದೊರಕುವ ಸೂಕ್ತಿ ಸುಭಾಷಿತ

ಲೋಕೋಕ್ತಿಗಳು ಅಸಂಖ್ಯಾತವಾಗಿವೆ. ಅವನ್ನೆಲ್ಲ ಸಂಗ್ರಹಿಸಲು ಇನ್ನಷ್ಟು ಕಾಲಾವಕಾಶದ ಆವಶ್ಯಕತೆಯುಂಟು. ಆದ್ದರಿಂದ ಪ್ರಕೃತ ನಾನು ಆರಿಸಿಟ್ಟುಕೊಂಡ ಸೂಕ್ತಿಗಳನ್ನು ಮಾತ್ರ ಇಲ್ಲಿ ದಿಙ್ಮಾತ್ರ ಪ್ರದರ್ಶನಕ್ಕಾಗಿ ನೀಡುತ್ತಿದ್ದೇನೆ. ಸಹೃದಯ ವಾಚಕರ ಬೆಂಬಲ ದೊರೆತಲ್ಲಿ ಮುಂದಿನ ಮುದ್ರಣದಲ್ಲಿ ಅಂಥವನ್ನೆಲ್ಲ ಸೇರಿಸಿ ಇನ್ನೊಂದು ದೊಡ್ಡ ಗ್ರಂಥವನ್ನು ಪ್ರಕಟಿಸುವ ಆಸೆಯನ್ನು ಇಟ್ಟುಕೊಂಡಿದ್ದೇನೆ.

ಸಂಸ್ಕೃತವೂ ಸೇರಿದಂತೆ ಉತ್ತಮ ಸಾಹಿತ್ಯವನ್ನು ಪ್ರಕಟಿಸುವ ಸಾಹಸ ಕೃತ್ಯಕ್ಕೆ ವ್ಯಾಪಾರ ದೃಷ್ಟಿಯವರಾರೂ ಕೈಹಾಕದಿರುವ ಇಂದಿನ ಸಂದರ್ಭದಲ್ಲಿ ಲಲಿತಾ ಪ್ರಕಾಶನದ ಶ್ರೀಮಾನ್ ಚಿದಂಬರಯ್ಯನವರೂ ಮತ್ತು ಅವರ ಸುಪುತ್ರ ಶ್ರೀ ಕೆ. ಸಿ. ಪ್ರಭಾಕರ್ ಅವರೂ ಈ ಸೇವಾಕಾರ್ಯವನ್ನು ಶ್ರದ್ಧೆಯಿಂದ ನಡೆಸಿದ್ದಾರೆ. ಅವರೀರ್ವರಿಗೂ ಮತ್ತು ಪರಿಮಳ ಮುದ್ರಣಾಲಯದ ಸಿಬ್ಬಂದಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಸಂಸ್ಕೃತ ಸಾಹಿತ್ಯದ ಪ್ರಚಾರವು ವ್ಯಾಪಕವಾಗಿ ಆಗಬೇಕಾಗಿರುವ ಈ ಕಾಲದಲ್ಲಿ ಕನ್ನಡಿಗರು ಈ ಗ್ರಂಥವನ್ನು ಕೊಂಡು ಪ್ರೋತ್ಸಾಹಿಸುವರೆಂದು ಬಗೆಯುತ್ತೇನೆ.

ಬೆಂಗಳೂರು
27.5.2001

**ಡಾ|| ಬಿ. ಎಸ್. ರಾಮಕೃಷ್ಣರಾವ್**
ಸಂಸ್ಕೃತ ಪ್ರಾಧ್ಯಾಪಕ
ಸುರಾನಾ ಕಾಲೇಜು, ಬಸವನಗುಡಿ

|| ಶ್ರೀಃ ||

# ಕ್ಷೇಮೇಂದ್ರ ಕವಿ ಸೂಕ್ತಿಗಳು

**ಅಂತವಂತಃ ಸ್ವಭಾವೇನ ಪ್ರಭಾವವಿಭವಾದಯಃ**

**– ರಾಮಾಯಣಮಂಜರೀ**

ಅಧಿಕಾರ, ಅಂತಸ್ತು, ಐಶ್ವರ್ಯಗಳೆಲ್ಲ ಸಹಜವಾಗಿಯೇ ಒಂದು ಕೊನೆಯುಳ್ಳವಾಗಿರುತ್ತವೆ.

**ಅಂತಸ್ತುಚ್ಛಾಸು ವಾಣೀಷು ಧೀರೂಣಾಂ ಹಿ ಪ್ರಗಲ್ಭತಾ**

**– ಭಾರತಮಂಜರೀ 4.312**

ಆಂತರ್ಯದಲ್ಲಿ ತುಚ್ಛವಾಗಿರುವ ಮಾತುಗಳನ್ನಾಡುವುದರಲ್ಲಿ ಪುಕ್ಕಲು ಮಂದಿಗೇ ಪ್ರೌಢಿಮೆ ಹೆಚ್ಚು.

**ಅಂಶೇ ವಿವಾಹೇ ದಾನೇ ಚ ವಾಗೇಕೈವ ವಿಪಶ್ಚಿತಾವ್**

**– ಭಾರತಮಂಜರೀ 3.1876**

ಪಾಲು, ಮದುವೆ ಮತ್ತು ದಾನ ನೀಡುವ ವಿಷಯಗಳಲ್ಲಿ ವಿದ್ವಾಂಸರ ಮಾತು ಯಾವಾಗಲೂ ಒಂದೇ.

**ಅಕೃಚ್ಛ್ರೇಣ ಕಥಂ ಯಾಂತಿ ಪ್ರಾಣಾಃ ಕಲುಷಕರ್ಮಣ : ?**

**ಬೃಹತ್ಕಥಾಮಂಜರೀ**

ಕೆಟ್ಟ ಕೆಲಸಗಳನ್ನು ಮಾಡಿದಾತನ ಪ್ರಾಣವು ಅಷ್ಟು ಅನಾಯಾಸವಾಗಿ ಹೋಗುವುದುಂಟೇ?

**ಅಕೃತ್ವಾ ಧರ್ಷಣಾಂ ಪೂರ್ವಂ ಕಥಂ ಯುದ್ಧಂ ಪ್ರವರ್ತತೇ?**

**– ಭಾರತಮಂಜರೀ 2.78**

ಮೊದಲಿಗೆ ಮೂದಲಿಸದಿದ್ದ ಮೇಲೆ ಯುದ್ಧವು ಆರಂಭವಾಗುವುದಾದರೂ ಹೇಗೆ ?

**ಆಚಾರು ಚಾರು ಸುಖಿನಾಂ, ಚಾರು ದುಃಖಾಯ ದುಃಖಿನಾವ್**

– ರಾಮಾಯಣಮಂಜರೀ

ಸುಖವಾಗಿರುವವರಿಗೆ ಸುಂದರವಲ್ಲದ್ದೂ ಸುಂದರ; ದುಃಖದಲ್ಲಿರುವವರಿಗೆ ಸುಂದರವೂ ದುಃಖದಾಯಕ.

**ಅತಿಪ್ರಸಂಗಕುಪಿತೋ ಯಾತಿ ಸ್ನಿಗ್ಧೋಽಪಿ ಶತ್ರುತಾವ್**

– ಭಾರತಮಂಜರೀ 3.1152

ಮಿತಿಮೀರಿದ ನಡವಳಿಕೆಯಿಂದ ಕುಪಿತನಾದ ಮಿತ್ರನೂ ಶತ್ರುವಾಗಿ ಬಿಡುತ್ತಾನೆ.

**ಅತೀತಂ ನಾನುಶೋಚಂತಿ ಸಾಧವೋ ಧೈರ್ಯಸಾಗರಾಃ**

– ರಾಮಾಯಣಮಂಜರೀ

ಧೈರ್ಯದ ಸಮುದ್ರಗಳಂತಿರುವ ಸಜ್ಜನರು ಕಳೆದುಹೋದುದಕ್ಕೆ ಚಿಂತೆ ಮಾಡುವುದಿಲ್ಲ.

**ಅತೀವ ಕೋಽಪ್ಯಭೋಗ್ಯೇಷು ವಿಧತ್ತೇ ಸಾಭಿಲಾಷತಾವ್**

– ಬೃಹತ್ಕಥಾಮಂಜರೀ

ಅನುಭವಿಸಬಾರದ ವಸ್ತುಗಳ ಬಗ್ಗೆ ಅದೇನೋ ಅತಿಯಾದ ಆಸೆಯು ಉಂಟಾಗುತ್ತದೆ.

**ಅತ್ಯನಾಲೋಚ್ಯ ಕಾರ್ಯೇಷು ಪ್ರವೃತ್ತಿಃ ದುಃಖಕಾರಣಮ್**

– ಬೃಹತ್ಕಥಾಮಂಜರೀ

ತಕ್ಕಷ್ಟು ಆಲೋಚನೆ ನಡೆಸದೆ ಕಾರ್ಯಪ್ರವೃತ್ತರಾಗುವುದು ದುಃಖಕ್ಕೆ ಕಾರಣವಾಗುತ್ತದೆ.

**ಅತ್ಯಂತಸುಖಲೇಖೋ ಹಿ ಬಹುದುಃಖೋ ಭವಾಂಬುಧಿಃ**

– ಬೃಹತ್ಕಥಾಮಂಜರೀ

ಸಂಸಾರವೆಂಬ ಸಾಗರದಲ್ಲಿ ಸುಖವು ಬಹು ಕಡಿಮೆ; ದುಃಖ ಇರುವುದೇ ಅತಿ ಹೆಚ್ಚು.

**ಅಥವಾ ನಿರ್ವಿವೇಕಾನಾಂ ದುಃಖಂ ವಿಶತಿ ನಾಂತರಮ್**

**– ರಾಮಾಯಣಮಂಜರೀ**

ವಿವೇಕಿಗಳಲ್ಲದವರ ಮನದೊಳಗೆ ದುಃಖವು ಇಳಿಯದು.

**ಅದ್ಭುತಾ ಧಾತುಃ ವಿಲಾಸಕುಟಿಲಾ ಗತಿಃ**

**– ಬೃಹತ್ಕಥಾಮಂಜರೀ**

ವಿಧಾತನ ವಿಲಾಸ ಕುಟಿಲವಾದ ಕಾರ್ಯವೈಖರಿಯು ಅದ್ಭುತವಾದದ್ದು.

**ಅದ್ವಾರೇಣ ವಿಶಂತ್ಯೇವ ಬುದ್ಧಿಮಂತೋ ರಿಪೋರ್ಗೃಹಮ್**

**– ಭಾರತಮಂಜರೀ 2.78**

ಬುದ್ಧಿವಂತರು ಶತ್ರುವಿನ ಮನೆಯನ್ನು ಮುಂಬಾಗಿಲ ಮೂಲಕ ಪ್ರವೇಶಿಸುವುದೇ ಇಲ್ಲ.

**ಅದ್ವೇಷ್ಟಾರೋ ಹಿ ಸಾಧವಃ**

**– ಭಾರತಮಂಜರೀ 13.865**

ದ್ವೇಷ ಮಾಡದಿರುವವರೇ ಸಾಧು–ಸತ್ಪುರುಷರು.

**ಅಧನ್ಯಃ ಕೋ ಹಿ ದೈವೇನ ಫಲಕಾಲೇ ನ ವಂಚಿತಃ ?**

**– ಬೃಹತ್ಕಥಾಮಂಜರೀ**

ಯಾವ ದುರದೃಷ್ಟಶಾಲಿಯು ತಾನೇ ಫಲ ದೊರಕಬೇಕಾದ ಸಮಯದಲ್ಲಿ ವಿಧಿಯಿಂದ ವಂಚಿತನಾಗಿಲ್ಲ ?

**ಅಧನ್ಯಸ್ಯ ಶುಭಂ ನಾಸ್ತಿ**

**– ಬೃಹತ್ಕಥಾಮಂಜರೀ**

ದುರದೃಷ್ಟಶಾಲಿಗೆ ಶುಭವೆಂಬುದಿಲ್ಲ.

**ಅಧನ್ಯೈರಾಹೃತಂ ನಾಮ ಕಲ್ಯಾಣೀಭಿರವಾಪ್ಯತೇ**

**– ಬೃಹತ್ಕಥಾಮಂಜರೀ**

ನತದೃಷ್ಟರು ತಂದುದನ್ನು ಅದೃಷ್ಟಶಾಲಿನಿಯರು ಪಡೆದುಕೊಳ್ಳುತ್ತಾರೆ.

**ಅಧೀರಂ ಲಲನಾ ಮನಃ**

– ಬೃಹತ್ಕಥಾಮಂಜರೀ

ಹೆಂಗಳೆಯರ ಮನಸ್ಸು ಸ್ಥೈರ್ಯವಿಲ್ಲದ್ದು.

**ಅಧೈರ್ಯಲುಪ್ತ ಚಿತ್ತಾನಾಂ ಪೌರುಷಂ ಪರಿಹೀಯತೇ**

– ರಾಮಾಯಣಮಂಜರೀ

ಹೇಡಿತನದಿಂದ ಮನಸ್ಸು ಕಳೆದುಕೊಂಡವರ ಪೌರುಷವು ಕುಂದಿಹೋಗುತ್ತದೆ.

**ಅನಧೀತ್ಯ ಗುರೋರಗ್ರೇ ಪ್ರತಿಭಾತಿ ಕಥಂ ಶ್ರುತಿಃ ?**

– ಭಾರತಮಂಜರೀ 3.938

ಗುರುಗಳ ಎದುರು ಓದದ ಮೇಲೆ ವೇದವು ಗೋಚರವಾಗುವುದಾದರೂ ಹೇಗೆ ?

**ಅನರ್ಥಂ ವಿಪದಾಂ ಮೂಲಂ ದ್ಯೂತಂ ತು ಕಲಹೋದಯಮ್**

– ಭಾರತಮಂಜರೀ 2.307

ಜೂಜೆಂಬುದು ಅನರ್ಥಕ, ವಿಪತ್ತಿಗೆ ಮೂಲ ಮತ್ತು ಕಲಹಕ್ಕೆ ಕಾರಣ.

**ಅನಾಯಾಸಂ ಹಿ ಪಾಥೇಯಂ ಯಥೇಷ್ಟಂ ಕಥನಂ ಪಥಿ**

– ಬೃಹತ್ಕಥಾಮಂಜರೀ

ಹಾದಿಯಲ್ಲಿ ಮನಬಂದಂತೆ ಹರಟುವುದು ಆಯಾಸವುಂಟು ಮಾಡದ ಬುತ್ತಿಯೇ ಸರಿ.

**ಅನಾಯಾಸಮಮೃತಂ ಬತ ಕಸ್ಯ ನ ರೋಚತೇ?**

– ಭಾರತಮಂಜರೀ 1.1186

ಕಷ್ಟಪಡದೆಯೇ ದೊರೆತ ಅಮೃತವು ಯಾರಿಗೆ ತಾನೇ ಇಷ್ಟವಾಗುವುದಿಲ್ಲ ?

**ಅನಿತ್ಯೌ ಸರ್ವಥಾ ನೂನಂ ಸುಭಟಾನಾಂ ಜಯಾಜಯೌ**

– ಭಾರತಮಂಜರೀ 7.512

ಸಮರ್ಥ ಸೈನಿಕರಿಗೂ ಜಯ–ಪರಾಜಯಗಳು ನಿಜಕ್ಕೂ ನಿತ್ಯವಲ್ಲ.

**ಅನಿಸ್ತೀರ್ಣ ದುಷ್ಕರ್ವಾ ಸಂಕಟೈಃ ಶ್ರೀರ್ನ ಲಭ್ಯತೇ**

– ಬೃಹತ್ಕಥಾಮಂಜರೀ

ಕಠಿಣಕೆಲಸಗಳನ್ನು ಮಾಡಿ ಅನೇಕ ಕಷ್ಟಗಳನ್ನು ದಾಟದಿದ್ದವರಿಗೆ ಸಿರಿಸಂಪತ್ತು ಲಭ್ಯವಾಗುವುದಿಲ್ಲ.

**ಅನುದ್ಗೀರ್ಣೋ ಹಿ ವಚಸಾ ಮನ್ಯುರ್ನೈವೋಪಶಾಮ್ಯತಿ**

– ರಾಮಾಯಣ ಮಂಜರೀ

ಮಾತಿನ ಮೂಲಕ ಹೊರಹಾಕುವವರೆಗೆ ಸಿಟ್ಟು ಉಪಶಮನವಾಗುವುದಿಲ್ಲ.

**ಅನುಭೂತವ್ಯಥಃ ಸರ್ವೋ ಜಾನಾತಿ ಪರವೇದನಾಮ್**

– ಬೃಹತ್ಕಥಾಮಂಜರೀ

ವ್ಯಥೆಯ ಅನುಭವವಿರುವವರೆಲ್ಲ ಇನ್ನೊಬ್ಬರ ವೇದನೆಯನ್ನು ಅರಿತುಕೊಳ್ಳುತ್ತಾರೆ.

**ಅನ್ಯದ್ವಿಧತ್ತೇ ಪುರುಷಃ ಕರೋತಿ ವಿಧಿರನ್ಯಥಾ**

– ಬೃಹತ್ಕಥಾಮಂಜರೀ

ಮನುಷ್ಯನು ಒಂದನ್ನು ಬಗೆದರೆ ವಿಧಿಯು ಇನ್ನೊಂದನ್ನು ಬಗೆಯುತ್ತದೆ.

**ಅಪಥ್ಯೇಷ್ವಾತುರಸ್ಯೇಹ ನಾಭಿಲಾಷಃ ಪ್ರಶಾಮ್ಯತಿ**

– ಬೃಹತ್ಕಥಾಮಂಜರೀ

ರೋಗಿಗೆ ಅಪಥ್ಯದ ಬಗ್ಗೆ ಅತ್ಯಾಸೆಯು ಇಲ್ಲಿ ಕೊನೆಗೊಳ್ಳುವುದೇ ಇಲ್ಲ.

**ಅಪೈತಿ ನೈಕಪುತ್ರಾಣಾಂ ಸಂತಾನಕ್ಷಯಜಂ ಭಯಮ್**

– ಭಾರತಮಂಜರೀ 1.439

ಒಬ್ಬನೇ ಮಗನನ್ನು ಪಡೆದಿರುವವರಿಗೆ ತಮ್ಮ ಸಂತತಿಯು ಎಲ್ಲಿ ನಿಂತು ಹೋಗುವುದೋ ಎಂಬ ಭಯವು ಹೋಗುವುದೇ ಇಲ್ಲ.

**ಅಪ್ರತ್ಯಯಶ್ಚ ಲೋಕೋಽಯಮ್**

– ಬೃಹತ್ಕಥಾಮಂಜರೀ

ಈ ಜನರನ್ನು ನಂಬುವುದು ತರವಲ್ಲ.

**ಅಬುದ್ಧಿಯೋಗಾದಧಮಾಃ ಸರ್ವದಾ ವಿಭವಾಸ್ಪದಮ್**

**– ಬೃಹತ್ಕಥಾಮಂಜರೀ**

ಬುದ್ಧಿಯಿಲ್ಲದ ಕಾರಣ ನೀಚರು ಯಾವಾಗಲೂ ಐಶ್ವರ್ಯಕ್ಕೆ ಪಾತ್ರರಾಗುವರು.

**ಅಭಗ್ನಪ್ರಣಯಾ ಶಕ್ತಿಃ ಮಹತ್ಸ್ವಪಿ ಮನೋಭುವಃ**

**– ರಾಮಾಯಣಮಂಜರೀ**

ಮನ್ಮಥನ ಶಕ್ತಿಯು ದೊಡ್ಡವರಲ್ಲಿಯೂ ಪ್ರೀತಿಯನ್ನು ಕಳೆದುಕೊಂಡಿರುವುದಿಲ್ಲ.

**ಅಭಾವಾಯೈವ ಜಾಯಂತೇ ಭವೇಽಸ್ಮಿನ್ ಸರ್ವಜಂತವಃ**

**– ಭಾರತಮಂಜರೀ 13.699**

ಈ ಸಂಸಾರದಲ್ಲಿ ಎಲ್ಲ ಪ್ರಾಣಿಗಳೂ ಹುಟ್ಟುವುದು ಇಲ್ಲದಿರುವಂತಾಗುವುದಕ್ಕಾಗಿಯೇ.

**ಅಭಾವಾವಧಯೋ ಭಾವಾಃ ನಿಧನಾವಧಿ ಜೀವಿತಮ್**

**– ರಾಮಾಯಣಮಂಜರೀ**

ಇಲ್ಲದಿರುವಿಕೆಯುಂಟಾಗುವವರೆಗೆ ಇರುವಿಕೆ ಮತ್ತು ಮರಣದವರೆಗೆ ಬದುಕು.

**ಅಭಿಮಾನಧನಾನಾಂ ಹಿ ಭುಜಾಯತ್ತಾ ಪ್ರತಿಕ್ರಿಯಾ**

**– ರಾಮಾಯಣಮಂಜರೀ**

ಅಭಿಮಾನವೆಂಬ ಐಶ್ವರ್ಯವುಳ್ಳವರಿಗೆ ಪ್ರತೀಕಾರವು ತೋಳಿನಲ್ಲಿರುತ್ತದೆ.

**ಅಭಿಮಾನೋಽವಮಾನಾಯ ದೃಪ್ತಾನಾಮಿಹ ಭೂಭುಜಾಮ್**

**– ಬೃಹತ್ಕಥಾಮಂಜರೀ**

ದರ್ಪದಿಂದಿರುವ ರಾಜರ ಸ್ವಾಭಿಮಾನವಿಲ್ಲಿ ಅವಮಾನಕ್ಕೆ ಎಡೆಮಾಡಿಕೊಡುತ್ತದೆ.

**ಅಭೀಷ್ಟಂ ಲಭ್ಯತೇ ದೈವಾತ್ ತ್ಯಕ್ತಂ ನ ಪುನರೇತಿ ತತ್**

**– ರಾಮಾಯಣಮಂಜರೀ**

ಅದೃಷ್ಟದಿಂದ ಇಷ್ಟಾರ್ಥವು ದೊರಕಿರುತ್ತದೆ ; ಅದನ್ನು ತ್ಯಜಿಸಿದರೆ ಮತ್ತೆ ಬರುವುದಿಲ್ಲ

**ಅಭುಕ್ತ್ವಾ ಸ್ವಕೃತಂ ಕರ್ಮ ಮರಣಂ ಪ್ರಾಪ್ಯತೇ ಕುತಃ?**

**– ಬೃಹತ್ಕಥಾಮಂಜರೀ**

ತಾನು ಮಾಡಿದ ಕರ್ಮದ ಫಲವನ್ನು ಇನ್ನೂ ಅನುಭವಿಸದೇ ಇರುವಾಗ ಸಾವು ಬರುವುದೆಂತು?

**ಅಮಂದನಿಂಬ ಕಟುಕದುಷ್ಟಾ ಹಿ ನೃಪಚೇಟಕಾಃ**

**– ಬೃಹತ್ಕಥಾಮಂಜರೀ**

ರಾಜಸೇವಕರೆಂಬುವವರು ಕಹಿ ಬೇವಿನಂತಿರುವವರೂ, ಕಟುಕರೂ ಮತ್ತು ದುಷ್ಟರೂ ಆಗಿರುತ್ತಾರೆ.

**ಅಮರ್ಯಾದೇಷು ಮರ್ಯಾದಾ ಕ್ರಿಯಮಾಣಾ ನ ಶೋಭತೇ**

**– ರಾಮಾಯಣಮಂಜರೀ**

ಮೇರೆ ಮೀರಿರುವವರಿಗೆ ಮರ್ಯಾದೆ ಮಾಡುವುದು ಶೋಭೆ ತರುವುದಿಲ್ಲ.

**ಅಮಾತ್ಯಯುಕ್ತಿಭಿರ್ಭೂಪಾಃ ಪ್ರಾಪ್ನುವಂತ್ಯೇವ ಸಂಪದಃ**

**– ಬೃಹತ್ಕಥಾಮಂಜರೀ**

ಮಂತ್ರಿಗಳ ಯುಕ್ತಿಗಳಿಂದ ರಾಜರು ಸಂಪತ್ತುಗಳನ್ನು ಪಡೆದೇ ಪಡೆಯುತ್ತಾರೆ.

**ಅರ್ಥಿನೋಃ ಸಮತಾ ಯತ್ರ ತತ್ರ ನ್ಯಾಯೋ ವಿವೇಚ್ಯತೇ**

**– ಬೃಹತ್ಕಥಾಮಂಜರೀ**

ನ್ಯಾಯಾಪೇಕ್ಷಿಗಳಿಬ್ಬರೂ ಸಮಾನರಾಗಿರುವಲ್ಲಿ ನ್ಯಾಯವನ್ನು ನಿರ್ಣಯಿಸಲಾಗುತ್ತದೆ.

**ಅರ್ಥೈರರ್ಥಾ ಇವಾಯಾಂತಿ ದುಃಖೈಃ ದುಃಖಪರಂಪರಾಃ**

**– ಭಾರತಮಂಜರೀ 3.1678**

ಹಣದಿಂದ ಹಣವೆಂಬಂತೆ, ದುಃಖದಿಂದ ದುಃಖದ ಪರಂಪರೆಗಳು ಉಂಟಾಗುತ್ತವೆ.

**ಅರ್ಥೋ ಹಿ ನಾಮ ಸತತಂ ಪುಂಸಾಂ ಪ್ರಾಣಾ ಬಹಿಶ್ಚರಾಃ**

– ಭಾರತಮಂಜರೀ 3.1731

ಹಣವೆಂಬುದು ಮನುಷ್ಯರಿಗೆ ಯಾವಾಗಲೂ ಹೊರಗೆ ಓಡಾಡುವ ಪ್ರಾಣವೇ ಸರಿ.

**ಅಲಸಾ ದೀರ್ಘಸೂತ್ರಾಶ್ಚ ದೃಶ್ಯಂತೇ ವಿಭವೈರ್ಯುತಾಃ**

– ಭಾರತಮಂಜರೀ 13.1162

ಸೋಮಾರಿಗಳೂ, ಚುರುಕು ಕೆಲಸ ಮಾಡದಿರುವವರೂ ಐಶ್ವರ್ಯದಿಂದಿರುವುದನ್ನು ಕಾಣುತ್ತೇವೆ.

**ಅಲಸಾ ಬುದ್ಧಿಹೀನಾಶ್ಚ ಸರ್ವಥಾ ವಿಪದಾಂ ಪದಮ್**

– ಭಾರತಮಂಜರೀ 13.440

ಸೋಮಾರಿಗಳೂ ಮತ್ತು ದಡ್ಡರೂ ಆಪತ್ತಿಗೆ ಪಾತ್ರರೆಂಬುದು ನಿಶ್ಚಿತ.

**ಅಲ್ಪಾಪ್ಯುಪಕೃತಿರ್ಯಾತಿ ವಿಸ್ತಾರಂ ವಿಷಮಸ್ಥಿತೌ**

– ಬೃಹತ್ಕಥಾಮಂಜರೀ

ವಿಷಮಪರಿಸ್ಥಿತಿಯಲ್ಲಿ ಸ್ವಲ್ಪ ಉಪಕಾರವೂ ಹೆಚ್ಚಿನ ಉಪಯೋಗಿತೆಯನ್ನು ಹೊಂದಿರುತ್ತದೆ.

**ಅವಜ್ಞಾಂ ಪ್ರೀತಿವಾಕ್ಯೇಽಪಿ ನ ಸಹಂತೇಽಭಿಮಾನಿನಃ**

– ರಾಮಾಯಣಮಂಜರೀ

ಸ್ವಾಭಿಮಾನಿಗಳು ತಿರಸ್ಕಾರವನ್ನು ಸರಸ ಸಲ್ಲಾಪದಲ್ಲಿಯೂ ಸಹಿಸುವುದಿಲ್ಲ.

**ಅವಜ್ಞೋಪೇಕ್ಷಿತೇ ಪ್ರೇಮ್ಣಿ ಸಂಧಾನಂ ದುಷ್ಕರಂ ಪುನಃ**

– ರಾಮಾಯಣಮಂಜರೀ

ಅವಹೇಳನದಿಂದ ಉದಾಸೀನ ಮಾಡಲ್ಪಟ್ಟ ಪ್ರೇಮವನ್ನು ಮತ್ತೆ ಒಂದುಗೂಡಿಸುವುದು ಕಷ್ಟಸಾಧ್ಯ.

**ಅವಶ್ಯಂ ಹಿ ಭವಂತ್ಯೇವ ಜೀವತಾಂ ಸಂಗಮಃ ಪುನಃ**

– ಬೃಹತ್ಕಥಾಮಂಜರೀ

ಬದುಕಿದ್ದವರ ಸಮಾಗಮವು ಮತ್ತೆ ಆಗಿಯೇ ತೀರುತ್ತದೆ.

**ಅವಾಪ್ಯತೇ ಶುಭಫಲಂ ಸುಕೃತೈಃ ಪೂರ್ವಸಂಚಿತೈಃ**

– ಬೃಹತ್ಕಥಾಮಂಜರೀ

ಹಿಂದಿನಿಂದ ಕೂಡಿಡಲ್ಪಟ್ಟ ಪುಣ್ಯಕರ್ಮಗಳಿಂದಾಗಿ ಶುಭಫಲವು ದೊರೆಯುತ್ತದೆ.

**ಅವಿಜ್ಞಾತಸ್ವಭಾವೈರ್ಹಿ ಸಂಗತಿರ್ವಿಪದಾಂ ಪದವ್**

– ಬೃಹತ್ಕಥಾಮಂಜರೀ

ಸ್ವಭಾವವನ್ನು ಅರಿಯದವರ ಜೊತೆ ಒಡನಾಟವು ವಿಪತ್ತಿಗೆ ಆಸ್ಪದ.

**ಅಸತ್ಯಪ್ರಣಯಾಃ ಸತ್ಯಶಂಕಿನ್ಯಃ ಸರ್ವಥಾ ಸ್ತ್ರಿಯಃ**

– ರಾಮಾಯಣಮಂಜರೀ

ಸ್ತ್ರೀಯರು ಸುಳ್ಳನ್ನು ಪ್ರೀತಿಸುವವರೂ ಮತ್ತು ಸತ್ಯವನ್ನು ಅನುಮಾನದಿಂದ ಕಾಣುವವರೇ ಸರಿ.

**ಅಸಮ್ಯಗ್ವೀಕ್ಷಿತಂ ದ್ರಷ್ಟುಂ ಪಂಡಿತೋ ನಾನುವರ್ತತೇ**

– ಬೃಹತ್ಕಥಾಮಂಜರೀ

ತಪ್ಪಾಗಿ ಕಂಡದ್ದನ್ನು ನೋಡಲು ತಿಳಿವಳಿಕಸ್ಥನು ಮರಳಿ ಯತ್ನಿಸನು.

**ಅಸುಭಿಃ ಸಹ ನಿರ್ಬಂಧೋ ದುರ್ವೃತ್ತಾನಾಂ ನಿವರ್ತತೇ**

– ರಾಮಾಯಣಮಂಜರೀ

ದುಷ್ಟರ ಹಠವೆಲ್ಲವೂ ಸಾವಿನೊಂದಿಗೆ ಕೊನೆಗೊಳ್ಳುತ್ತದೆ.

**ಅಸುರಾಶ್ಚ ಬಹುಚ್ಛಲಾಃ**

– ಬೃಹತ್ಕಥಾಮಂಜರೀ

ರಾಕ್ಷಸರು ಬಹುಮಾಯೆಗಳುಳ್ಳವರು.

**ಅಹಿಂಸಾ ಧಾಮ ಧರ್ಮಸ್ಯ, ದುಃಖಸ್ಯಾಯತನಂ ಸ್ಪೃಹಾ**

– ಭಾರತಮಂಜರೀ 13.1158

ಅಹಿಂಸೆಯು ಧರ್ಮದ ನೆಲೆಮನೆ ; ಆಸೆಯು ದುಃಖದ ಆಶ್ರಯಸ್ಥಾನ.

**ಅಹಿಂಸಾ ಪರಮೋ ಧರ್ಮಃ ಕ್ರತುಶ್ಚಾದ್ರವ್ಯಡಂಬರಃ**

**– ಭಾರತಮಂಜರೀ 13.962**

ಅಹಿಂಸೆಯು ಶ್ರೇಷ್ಠವಾದ ಧರ್ಮ; ಹಣದ ಆಡಂಬರವಿಲ್ಲದ ಯಜ್ಞ ಕೂಡ.

**ಅಹೋ ಕಷ್ಟಾ ನೃಣಾಂ ರಾಜಕುಲೇ ಸ್ಥಿತಿಃ**

**– ಬೃಹತ್ಕಥಾಮಂಜರೀ**

ಅಯ್ಯೋ! ಅರಮನೆಗಳಲ್ಲಿ ಇರುವಿಕೆಯು ಮನುಜರಿಗೆ ಕಷ್ಟಸಾಧ್ಯವಾದುದು.

**ಅಹೋ ದುಃಖಂ ದಾರಿದ್ರ್ಯಂ ಮರಣಾಧಿಕಮ್**

**– ಬೃಹತ್ಕಥಾಮಂಜರೀ**

ಬಡತನವೆಂಬುದು ಸಾವಿಗೂ ಮಿಗಿಲಾದ ದುಃಖವೇ ಸರಿ!

**ಅಹೋ ಪ್ರಿಯಾ ಪ್ರಣಯಿನೀ ಕಥಂ ತ್ಯಾಜ್ಯಾ ಸತಾ ಸತೀ ?**

**– ರಾಮಾಯಣಮಂಜರೀ**

ಪ್ರಿಯತಮೆಯೂ, ಪ್ರೀತಿಯುಳ್ಳವಳೂ, ಸಚ್ಚಾರಿತ್ರ್ಯವುಳ್ಳವಳೂ ಆದ ಸಾಧ್ವಿಯನ್ನು ಸತ್ಪುರುಷನು ಹೇಗೆ ತ್ಯಜಿಸಿಯಾನು?

**ಅಹೋ ವಿಶೃಂಖಲಧಿಯಾಂ ಲೋಕೋ ವಚಸಿ ವರ್ತತೇ**

**– ಭಾರತಮಂಜರೀ 2.174**

ಅಯ್ಯೋ! ಜನರು ಲಂಗುಲಗಾಮಿಲ್ಲದ ಬುದ್ಧಿಯವರ ಮಾತಿನಂತೆ ನಡೆಯುತ್ತಾರೆ.

**ಅಹೋ ಸತತ ದುಃಖಾಯ ಕರ್ಕಶಾಯ ತ್ರಿವೃತ್ತಯಃ**

**– ಬೃಹತ್ಕಥಾಮಂಜರೀ**

ಅಯ್ಯೋ! ಮೂರುವೃತ್ತಿಗಳು ಕಠಿಣ ಹಾಗೂ ಸತತ ದುಃಖಕ್ಕೆ ಕಾರಣವಾಗಿರುತ್ತವೆ.

**ಆಜ್ಞಾ ಹಿ ಕಾಮನೃಪತೇಃ ಅನುಕೂಲವಾಮಾ**

**– ಭಾರತಮಂಜರೀ 1.574**

ಕಾಮರಾಜನ ಆಣತಿಯು ಅನುಕೂಲಕ್ಕೆ ವಿರುದ್ಧವಾದುದು.

**ಆತ್ಮಜಾತಿಂ ಸಮುತ್ಸೃಜ್ಯ ನ ಯಾಂತ್ಯಭ್ಯಧಿಕಂ ಖಲಾಃ**

– ಬೃಹತ್ಕಥಾಮಂಜರೀ

ದುಷ್ಟರು ತಮ್ಮ ಜಾತಿ (ಬುದ್ಧಿ)ಯನ್ನು ಬಿಟ್ಟು ಹೆಚ್ಚಿನ ಹೃದಯವೈಶಾಲ್ಯವನ್ನು ಹೊಂದಿರುವುದಿಲ್ಲ.

**ಆತ್ಮಹಾ ಪಾಪಮಶ್ನುತೇ**

– ರಾಮಾಯಣಮಂಜರೀ

ಆತ್ಮಹತ್ಯೆ ಮಾಡಿಕೊಳ್ಳುವವನು ಪಾಪವನ್ನೇ ತಿನ್ನುತ್ತಾನೆ.

**ಆನಂದಾಯ ನ ಕಸ್ಯೇಂದುಃ ಸುಧಾನಿಷ್ಯಂದ ಸುಂದರಃ**

– ರಾಮಾಯಣಮಂಜರೀ

ಅಮೃತ ಸೂಸುವ ಸುಂದರ ಚಂದ್ರನು ಯಾರಿಗೆ ತಾನೇ ಆನಂದ ತಾರನು.

**ಆಪತ್ಸು ಮಹತಾಮೇವ ದರ್ಶನಂ ಕಲ್ಪಪಾದಪಃ**

– ಭಾರತಮಂಜರೀ 13.1700

ಕಷ್ಟಕಾಲದಲ್ಲಿ ಮಹಾತ್ಮರ ದರ್ಶನವು ಕಲ್ಪವೃಕ್ಷವಿದ್ದಂತೆ.

**ಆಪತ್ಸ್ವಪಿ ನ ಸೀದಂತಿ ಸತಾಂ ಸತ್‌ಪ್ರಕ್ರಿಯಾಃ ಕ್ರಿಯಾಃ**

– ಭಾರತಮಂಜರೀ 1.455

ಸಜ್ಜನರು ಸೆರಿಯಾಗಿ ಆರಂಭಿಸಿದ ಸತ್ಕಾರ್ಯಗಳು ವಿಪತ್ಕಾಲದಲ್ಲೂ ಹಾಳಾಗುವುದಿಲ್ಲ.

**ಆಪದಃ ಭವಂತ್ಯೇವ ಮಹತಾಮಪಿ ದುಷ್ಕೃತೈಃ**

– ಬೃಹತ್ಕಥಾಮಂಜರೀ

ಕೆಟ್ಟ ಕೆಲಸಗಳಿಂದ ದೊಡ್ಡವರಿಗೂ ವಿಪತ್ತುಗಳು ಅವಶ್ಯ ಉಂಟಾಗುತ್ತವೆ.

**ಆಪದಿ ಪ್ರಾಣರಕ್ಷಾ ಹಿ ಧರ್ಮಸ್ಯ ಪ್ರಥಮಾಂಕುರಃ**

– ಭಾರತಮಂಜರೀ 13.598

ಆಪತ್ಕಾಲದಲ್ಲಿ ಪ್ರಾಣರಕ್ಷಣೆಯೇ ಧರ್ಮದ ಮೊದಲ ಮೊಳಕೆ.

**ಆಪನ್ನ ತ್ರಾಣಚತುರಂ ಚರಿತಂ ಹಿ ಮಹಾತ್ಮನಾಮ್**

– ರಾಮಾಯಣಮಂಜರೀ

ಆಪತ್ತಿನಲ್ಲಿರುವವರನ್ನು ಕಾಪಾಡುವ ಕೌಶಲವುಳ್ಳದ್ದೇ ಮಹಾತ್ಮರ ನಡವಳಿಕೆ.

**ಆಪನ್ನತ್ರಾಣವಿಮುಖಂ ಚರಿತಂ ನ ಮಹಾತ್ಮನಾಮ್**

– ಭಾರತಮಂಜರೀ 1.1384

ಕಷ್ಟದಲ್ಲಿರುವವರನ್ನು ಕಾಪಾಡಲು ಹಿಂಜರಿಯುವುದು ಮಹಾತ್ಮರ ನಡವಳಿಕೆಯಲ್ಲ.

**ಆಪನ್ನತ್ರಾಣ ಸಜ್ಜಾನಾಂ ಪ್ರಾಣಃ ಸತ್ತ್ವವತಾಂ ತೃಣಮ್**

– ರಾಮಾಯಣಮಂಜರೀ

ಕಷ್ಟಕ್ಕೆ ಸಿಲುಕಿದವರನ್ನು ಕಾಪಾಡಲು ಸಿದ್ಧರಾಗಿರುವ ಸತ್ತ್ವಶಾಲಿಗಳಿಗೆ ಪ್ರಾಣವು ಹುಲ್ಲಿಗೆ ಸಮ.

**ಆಯಾಸಭಾಜನೋ ನಿತ್ಯಂ ಭಾಗ್ಯಹೀನಾನುಗೋ ಜನಃ**

– ಭಾರತಮಂಜರೀ 3.473

ದುರದೃಷ್ಟಶಾಲಿಯ ಹಿಂಬಾಲಕರು ಯಾವಾಗಲೂ ಆಯಾಸಕ್ಕೆ ಪಾತ್ರರು.

**ಆಯುಃಶೇಷೇ ಕೃತಾಂತೋಽಪಿ ನೂನಂ ಯಾತಿ ವಯಸ್ಯತಾಮ್**

– ರಾಮಾಯಣಮಂಜರೀ

ಆಯುಷ್ಯವು ಬಾಕಿಯಿದ್ದಾಗ ಯಮನೂ ಗೆಳೆತನ ಹೊಂದುವುದು ನಿಶ್ಚಿತ.

**ಆಲಜಾಲೈಃ ಗಣಿಕಾ ವಂಚ್ಯಂತೇ ವಂಚಯಂತಿ ಚ**

– ಬೃಹತ್ಕಥಾಮಂಜರೀ

ವಿಷವರ್ತುಲಗಳಿಂದ ವೇಶ್ಯೆಯರು ವಂಚಿಸುತ್ತಾರೆ, ವಂಚನೆಗೂ ಒಳಗಾಗುತ್ತಾರೆ.

**ಆಶಯಃ ಸ್ತ್ರೀಣಾಂ ದುರ್ವಿಜ್ಞೇಯಃ ಸುರೈರಪಿ**

– ಬೃಹತ್ಕಥಾಮಂಜರೀ

ಹೆಂಗಸರ ಅಂತರಂಗದ ಅಭಿಪ್ರಾಯವನ್ನು ಅರಿಯುವುದು ದೇವತೆಗಳಿಗೂ ಕಷ್ಟ.

**ಆಶಾಂ ನೈವ ಕುರ್ವಂತಿ ಧೀಮಾನ್ ಭಾವೇಷು ಭಾವಿಷು**

– ಬೃಹತ್ಕಥಾಮಂಜರೀ

ಭವಿಷ್ಯತ್ತಿನ ಆಗುಹೋಗುಗಳ ಬಗ್ಗೆ ಬುದ್ಧಿವಂತರು ಅಪೇಕ್ಷೆಗಳನ್ನಿಟ್ಟು ಕೊಂಡಿರುವುದಿಲ್ಲ.

**ಆಶೀವಿಷಗುಹಾಘೋರಂ ರಾಜಗೇಹಂ ಸುದುಃಸಹಮ್**

– ಬೃಹತ್ಕಥಾಮಂಜರೀ

ಅರಮನೆಯೆಂಬುದು ಹಾವಿನ ಹುತ್ತದಂತೆ ಘೋರವೂ, ದುಃಸಹವೂ ಆಗಿರುತ್ತದೆ.

**ಆಸನ್ನವಿಪದಾಂ ಸತ್ಯಂ ಉಪದೇಶಾಃ ಶಿರೋರುಜಃ**

– ಭಾರತಮಂಜರೀ 3.454

ವಿಪತ್ಕಾಲವು ಸಮೀಪಿಸಿರುವವರಿಗೆ ಉಪದೇಶಗಳು ನಿಜಕ್ಕೂ ತಲೆನೋವೇ.

**ಆಸನ್ನಾಕುಶಲಾ ನೂನಂ ನ ಶೃಣ್ವಂತಿ ಹಿತಂ ವಚಃ**

– ಬೃಹತ್ಕಥಾಮಂಜರೀ

ಕೇಡು ಸಮೀಪಿಸಿರುವಂತಹವರು ಹಿತೋಕ್ತಿಯನ್ನು ಕೇಳುವುದಿಲ್ಲ.

**ಈರ್ಷ್ಯಾವತಾಂ ಕೇವಲಂ ತು ಸ್ತ್ರೀರಕ್ಷಾ ಮನಸೋ ಗದಃ**

– ಬೃಹತ್ಕಥಾಮಂಜರೀ

ಅಸೂಯಾಪರರಿಗೆ ಹೆಣ್ಣಿನ ರಕ್ಷಣೆಯು ಬರಿಯ ಮನೋರೋಗವಷ್ಟೆ.

**ಈಶ್ವರಾಃ ಗಾಢನಿರ್ಬಂಧಂ ಯಾಂತಿ ಧಾರ್ಷ್ಟ್ಯಂ ನಿವಾರಿತಾಃ**

– ಬೃಹತ್ಕಥಾಮಂಜರೀ

ತಡೆಯಲ್ಪಟ್ಟ ಪ್ರಭುಗಳು ಹಠದಿಂದ ಹೆಚ್ಚು ಧಾರ್ಷ್ಟ್ಯ ತೋರುತ್ತಾರೆ.

**ಈಶ್ವರಾ ಹಿ ಸ್ಮಿತಪ್ರಿಯಾಃ**

– ಬೃಹತ್ಕಥಾಮಂಜರೀ

ಒಡೆಯರಿಗೆ ಮುಗುಳ್ನಗೆಯು ಬಲು ಇಷ್ಟ.

**ಉಕ್ತಿವೈಚಿತ್ರ್ಯಮಾತ್ರೇಣ ಪ್ರಾಯಶೋ ಹ್ರಿಯತೇ ಜನಃ**

**– ಭಾರತಮಂಜರೀ 2.199**

ಮಾತಿನ ಜಾಣ್ಮೆ ಮಾತ್ರದಿಂದಲೇ ಸಾಮಾನ್ಯವಾಗಿ ಜನರೆಲ್ಲ ಆಕರ್ಷಿತರಾಗುತ್ತಾರೆ.

**ಉತ್ಫುಲ್ಲಾ ಭಾಂತಿ ರಾಗಿಣಃ**

**– ಬೃಹತ್ಕಥಾಮಂಜರೀ**

ಅನುರಾಗವುಳ್ಳವರು ಮುಖವರಳಿ ಹೊಳೆಯುತ್ತಾರೆ.

**ಉತ್ಸಾಹ ಶಕ್ತಿಹೀನೇಭ್ಯಃ ಸಿದ್ಧೋಽಪ್ಯರ್ಥಃ ಪಲಾಯತೇ**

**– ರಾಮಾಯಣಮಂಜರೀ**

ಉತ್ಸಾಹಶಕ್ತಿ ಇಲ್ಲದವರಿಗೆ ಒದಗಿ ಬಂದ ವಸ್ತುವೂ (ಇಲ್ಲದಂತೆ) ಓಡಿ ಹೋಗುತ್ತದೆ.

**ಉತ್ಸಾಹೋ ಧರ್ಮವೀರಾಣಾಂ ಮೂಲಂ ಸತ್ತ್ವಮಹಾತರೋಃ**

**– ಬೃಹತ್ಕಥಾಮಂಜರೀ**

ಧರ್ಮವೀರರ ಸತ್ತ್ವವೆಂಬ ಮಹಾವೃಕ್ಷಕ್ಕೆ ಉತ್ಸಾಹವೇ ಬೇರು.

**ಉಪವಾಸೋ ಹಿ ಮೂರ್ಖಾಣಾಂ ಕೇವಲಂ ಪ್ರಾಣಶೋಷಣಮ್**

**– ಭಾರತಮಂಜರೀ 13.857**

ಮೂರ್ಖರಿಗೆ ಉಪವಾಸವು ದೇಹದಂಡನೆ ಮಾತ್ರ.

**ಉಪಾಯೇಷು ಧೀಮತಾಂ ಕಾರ್ಯಸಿದ್ಧಯಃ**

**– ಬೃಹತ್ಕಥಾಮಂಜರೀ**

ಬುದ್ಧಿವಂತರ ಕಾರ್ಯಸಿದ್ಧಿಯು ಉಪಾಯಗಳಲ್ಲಡಗಿರುತ್ತದೆ.

**ಊಚುರ್ಧಾತುವಿಕಾರೇಣ ಸ್ವಪ್ನಾನಾಮಪ್ರಮಾಣತಾಮ್**

**– ರಾಮಾಯಣಮಂಜರೀ**

(ವಾತ, ಪಿತ್ತ ಕಫಗಳೆಂಬ) ಧಾತುಗಳ ವಿಕಾರದಿಂದಾಗಿ ಕನಸುಗಳು ಪ್ರಮಾಣವಲ್ಲವೆನ್ನುತ್ತಾರೆ.

**ಏಕಸ್ಯಾಪ್ಯಪರಾಧೇನ ವೃಂದಮಾಯಾತಿ ವಾಚ್ಯತಾಮ್**

– **ಭಾರತಮಂಜರೀ 1.424**

ಒಬ್ಬನ ತಪ್ಪಿನಿಂದಾಗಿ ಇಡಿಯ ಗುಂಪೇ ನಿಂದನೆಗೆ ಒಳಗಾಗುತ್ತದೆ.

**ಐಕ್ಷವಂ ಸ್ಯಂದಮಾಸಾದ್ಯ ಕೋ ಹಿ ನಿಂಬರಸಂ ಪಿಬೇತ್**

– **ಬೃಹತ್ಕಥಾಮಂಜರೀ**

ಕಬ್ಬಿನ ಹಾಲು ದೊರೆತಿರುವಾಗ ಬೇವಿನ ರಸವನ್ನು ಕುಡಿಯುವವರಾರು?

**ಔಚಿತ್ಯಚಾರುಚರಿತಂ ಸಹಜಂ ಹಿ ಮಹಾತ್ಮನಾಮ್**

– **ರಾಮಾಯಣಮಂಜರೀ**

ಮಹಾತ್ಮರ ನಡವಳಿಕೆಯು ಸಹಜವಾಗಿಯೇ ಔಚಿತ್ಯದಿಂದ ಸುಂದರವಾಗಿರುತ್ತದೆ.

**ಐಶ್ವರ್ಯಮದಮತ್ತಾ ಹಿ ನ ಪಶ್ಯಂತಿ ನೃಪದ್ವಿಪಾಃ**

– **ಬೃಹತ್ಕಥಾಮಂಜರೀ**

ಐಶ್ವರ್ಯದ ಮದದಿಂದ ಕೊಬ್ಬಿದ ರಾಜರೆಂಬ ಸಲಗಗಳು ಏನನ್ನೂ ಸರಿಯಾಗಿ ಕಾಣವು.

**ಐಶ್ವರ್ಯಮದ ಮತ್ತೇಭ್ಯಃ ಕುಶಲಂ ಕೇನ ಲಭ್ಯತೇ**

– **ಭಾರತಮಂಜರೀ 1.309**

ಐಶ್ವರ್ಯದ ಮತ್ತಿನಿಂದ ಕೊಬ್ಬಿರುವವರಿಂದ ಯಾರಿಗೆ ತಾನೇ ಕುಶಲವುಂಟಾದೀತು?

**ಕಂದರ್ಪದರ್ಪದಲನೇ ನ ತು ಕಶ್ಚಿದೀಶಃ**

– **ಬೃಹತ್ಕಥಾಮಂಜರೀ**

ಮನ್ಮಥನ ಕೊಬ್ಬನ್ನು ಕರಗಿಸುವಲ್ಲಿ ಯಾರೂ ಸಮರ್ಥರಲ್ಲ.

**ಕಂ ವಾ ನಾಭಿಭವಾ ಲಕ್ಷ್ಮೀಃ ವಾರುಣೀವ ವಿಮೋಹಯೇತ್?**

– **ಬೃಹತ್ಕಥಾಮಂಜರೀ**

ಹೊಸದಾಗಿ ಲಭಿಸಿದ ಐಶ್ವರ್ಯವು, ಮದ್ಯದಂತೆ ಯಾರನ್ನು ತಾನೇ ಹುಚ್ಚಾಗಿಸುವುದಿಲ್ಲ?

**ಕಃ ಸದಾ ಸಹತೇ ವ್ಯಥಾವ್**

**– ಬೃಹತ್ಕಥಾಮಂಜರೀ**

ಸದಾಕಾಲವೂ ವ್ಯಥೆಯನ್ನು ಯಾರು ಸಹಿಸಿಯಾರು?

**ಕಃ ಸಹೇತಾಪದಾವಾಸಂ ಸಾಯಾಸಂ ಜನ್ಮ ಮಾನುಷವ್**

**– ಭಾರತಮಂಜರೀ 1.396**

ವಿಪತ್ತಿನ ನೆಲೆಮನೆಯಾಗಿ ಆಯಾಸವುಂಟು ಮಾಡುವ ಈ ಮನುಷ್ಯ ಜನ್ಮವನ್ನು ಸಹಿಸಬಲ್ಲವರಾರು?

**ಕಥಂ ನ ಸ್ಕಂಧವಾಧತ್ತೇ ದಿಕ್ಕುಂಜರಪದೇ ಮೃಗಃ**

**– ರಾಮಾಯಣಮಂಜರೀ**

ದಿಗ್ದಂತಿಯ ಸ್ಥಾನದಲ್ಲಿರುವ ಜಿಂಕೆಯು ಹೆಗಲನ್ನು ಏರದಿರುವುದೇ?

**ಕಥಂ ಪರೋಪಕಾರೇಷು ನಿಷೇಧೇ ವಾಕ್ ಪ್ರವರ್ತತೇ ?**

**– ಬೃಹತ್ಕಥಾಮಂಜರೀ**

ಪರೋಪಕಾರ ಮಾಡುತ್ತಿರುವಾಗ ಬೇಡವೆಂಬ ಮಾತು ಹೊರಡುವುದೆಂತು?

**ಕನ್ಯಕಾ ಜನಕಾಧೀನಾ**

**– ಬೃಹತ್ಕಥಾಮಂಜರೀ**

ಹೆಣ್ಣುಮಗಳು ತಂದೆಗೆ ಅಧೀನಳು.

**ಕನ್ಯಾ ಪ್ರಭಾವೇಣ ಪ್ರಾಪ್ನುವಂತೀಪ್ಸಿತಂ ನರಾಃ**

**– ಬೃಹತ್ಕಥಾಮಂಜರೀ**

ಹೆಂಗಸರ ಪ್ರಭಾವದಿಂದ ಗಂಡಸರು ತಮ್ಮ ಇಷ್ಟಾರ್ಥವನ್ನು ಪಡೆಯುತ್ತಾರೆ.

**ಕಮಲಾಕಮಲಂ ದೃಷ್ಟ್ವಾ ನಾನ್ಯದಬ್ಜಂ ಸ್ಪೃಶತ್ಯಲಿಃ**

**– ಬೃಹತ್ಕಥಾಮಂಜರೀ**

ಲಕ್ಷ್ಮಿಯ ತಾವರೆಯನ್ನು ಕಂಡ ಮೇಲೆ ದುಂಬಿಯು ಬೇರೊಂದು ಕಮಲವನ್ನು ಮುಟ್ಟುವುದಿಲ್ಲ.

**ಕರೋತಿ ಕಂ ನ ವಶಗಂ ಸಾಭಿಲಾಷಂ ಪ್ರಿಯೋ ಜನಃ**

– ಬೃಹತ್ಕಥಾಮಂಜರೀ

ಪ್ರಿಯರಾದವರು ಯಾರನ್ನು ತಾನೇ ಅಭಿಲಾಷೆಯುಳ್ಳವರನ್ನಾಗಿಯೂ ತಮ್ಮ ವಶದಲ್ಲಿರುವವರನ್ನಾಗಿಯೂ ಮಾಡಲಾರರು?

**ಕಲ್ಪವಲ್ಲೀ ಹಿ ಧೂರ್ತತಾ**

– ಬೃಹತ್ಕಥಾಮಂಜರೀ

ಧೂರ್ತಸ್ವಭಾವವು ಕಲ್ಪವೃಕ್ಷದ ಬಳ್ಳಿಯಂತೆ.

**ಕಸ್ಯ ನೋನ್ಮಾದನಂ ಧನಮ್**

– ಬೃಹತ್ಕಥಾಮಂಜರೀ

ಹಣವು ಯಾರಿಗೆ ತಾನೇ ಹುಚ್ಚು ಹಿಡಿಸುವುದಿಲ್ಲ?

**ಕಸ್ಯ ಲಾಭೋ ಹಿ ನೋತ್ಸವೇ**

– ಬೃಹತ್ಕಥಾಮಂಜರೀ

ಉತ್ಸವದಲ್ಲಿ ಯಾರಿಗೆ ಲಾಭವಿಲ್ಲ?

**ಕಸ್ಯಾಮೃತಂ ನ ಧನಯೌವನಕೇಲಿಬಂಧಾಃ**

– ಬೃಹತ್ಕಥಾಮಂಜರೀ

ಹಣ ಮತ್ತು ಯೌವನದ ಆಟಗಳು ಯಾರಿಗೆ ಅಮೃತಪ್ರಾಯವಲ್ಲ ?

**ಕಾಂತಾಕಟಾಕ್ಷ ಚಪಲಂ ಚಪಲಂ ಯೌವನಂ ಧನಮ್**

– ಬೃಹತ್ಕಥಾಮಂಜರೀ

ಯೌವನ ಮತ್ತು ಹಣ ಇವೆರಡೂ ಕಾಂತೆಯ ಕುಡಿಗಣ್ಣಿನ ನೋಟದಂತೆ ಕ್ಷಣಿಕ.

**ಕಾಂತಾಕಟಾಕ್ಷ ಹೃಷ್ಟೋ ಹಿ ನ ವೇತ್ತಿ ಮರಣಂ ಜನಃ**

– ಭಾರತಮಂಜರೀ 1.914

ಕಾಂತೆಯ ಕಟಾಕ್ಷದಿಂದ ಸಂತುಷ್ಟರಾದ ಜನರು ಮರಣವಿರುವುದನ್ನು ಅರಿಯುವುದೇ ಇಲ್ಲ.

**ಕಾಕತಾಲೀಯಯೋಗಿನ್ಯಃ ಸರ್ವಸ್ಯೈವ ವಿಭೂತಯಃ**

**– ರಾಮಾಯಣಮಂಜರೀ**

ಐಶ್ವರ್ಯವು ಲಭಿಸುವುದು ಎಲ್ಲರಿಗೂ ಕಾಕತಾಳೀಯದಂತೆ ಅಷ್ಟೆ!

**ಕಾಮಃ ಸಂಕಲ್ಪವಸತಿಃ ಇತಿ ಸತ್ಯಾ ಜನಸ್ಥಿತಿಃ**

**– ಬೃಹತ್ಕಥಾಮಂಜರೀ**

'ಕಾಮ'ನು ಮನಃಸಂಕಲ್ಪದಲ್ಲಿ ನೆಲೆಸಿರುವನೆಂಬ ಜನರ ನುಡಿಯು ಸತ್ಯ ಸಂಗತಿ.

**ಕಾಮಕೇಲಿ ಕಲಾಕಾಲೇ ವಿಯುಕ್ತಃ ಕೋ ನು ಜೀವತಿ?**

**– ಬೃಹತ್ಕಥಾಮಂಜರೀ**

ಕಾಮಕ್ರೀಡೆಯ ಸುಖವನ್ನನುಭವಿಸಬೇಕಾದ ಕಾಲದಲ್ಲಿ ಕಾಂತೆಯ ವಿಯೋಗ ಹೊಂದಿದ ಯಾರು ತಾನೇ ಬದುಕಿಯಾರು?

**ಕಾರ್ಯಾಕಾರ್ಯವಿಚಾರೋ ಹಿ ಕಸ್ಯ? ಜೀವಿತಸಂಶಯೇ**

**– ಬೃಹತ್ಕಥಾಮಂಜರೀ**

ಪ್ರಾಣಾಪಾಯವುಂಟಾದಾಗ ಕಾರ್ಯ–ಅಕಾರ್ಯಗಳನ್ನು ಕುರಿತು ಚಿಂತಿಸುವವರಾರು?

**ಕಾಲವಿಹಿತಂ ಸರ್ವಂ ಭವತಿ ಸಿದ್ಧಯೇ**

**– ಬೃಹತ್ಕಥಾಮಂಜರೀ**

ಕಾಲಕ್ಕೆ ಸರಿಯಾಗಿ ಮಾಡಿದ ಪ್ರಯತ್ನವೆಲ್ಲ ಸಫಲವಾಗುತ್ತದೆ.

**ಕಾಲಶಕ್ತಿರ್ಹಿ ಭಾವಾನಾಂ ಪ್ರತ್ಯಗ್ರರಸಪಾಯಿನೀ**

**– ರಾಮಾಯಣಮಂಜರೀ**

ಭಾವನೆಗಳ ಹೊಸರಸವನ್ನು ಹೀರುವುದೆಲ್ಲವೂ ಕಾಲದ ಶಕ್ತಿಯೇ ಸರಿ.

**ಕಾಲೇನಾಯಾಂತಿ ವಿಪದಃ ಕಾಲೇನಾಯಾಂತಿ ಸಂಪದಃ**

**– ಭಾರತಮಂಜರೀ 13.904**

ಸಂಪತ್ತು–ವಿಪತ್ತುಗಳೆಲ್ಲವೂ ಕಾಲಕ್ಕನುಗುಣವಾಗಿ ಬರುತ್ತವೆ.

**ಕಾಲೇಽಸ್ಮಿನ್ನುಪದೇಷ್ಟಾರೋ ನಿಸ್ತ್ರಿಂಶಾ ಏವ ಮಾನಿನಾಮ್**

– ಭಾರತಮಂಜರೀ 4.259

ಈ ಕಾಲದಲ್ಲಿ ಮಾನವಂತರಿಗೆ ಉಪದೇಶ ನೀಡುವವರು ಕ್ರೂರಿಗಳೇ ಸರಿ.

**ಕಾ ಹಿ ದೈವವಿಪರ್ಯಸ್ತಾ ಮಧುರಂ ವೇತ್ತಿ ನಾಮೃತಮ್**

– ಬೃಹತ್ಕಥಾಮಂಜರೀ

ವಿಧಿಯಿಂದ ವಂಚಿತಳಾದ ಯಾವಳು ತಾನೇ ಅಮೃತವನ್ನು ಸಿಹಿಯಲ್ಲವೆಂದು ಅರಿತಾಳು?

**ಕಿಂ ಧನೈರಗೃಹಸ್ಥಸ್ಯ?**

– ಬೃಹತ್ಕಥಾಮಂಜರೀ

ಗೃಹಸ್ಥನಲ್ಲದವನಿಗೆ ಹಣದಿಂದೇನು?

**ಕಿಂ ನ ಕುರ್ಯುಃ ಗೃಹೇ ರುದ್ಧಾ ವಿರಕ್ತಹೃದಯಾಃ ಸ್ತ್ರಿಯಃ**

– ಬೃಹತ್ಕಥಾಮಂಜರೀ

ಮನೆಯಲ್ಲಿ ತಡೆಯಲ್ಪಟ್ಟ ವಿರಕ್ತ ಹೃದಯದ ಸ್ತ್ರೀಯರು ಏನನ್ನು ತಾನೇ ಮಾಡುವುದಿಲ್ಲ?

**ಕಿಂ ನ ಕುರ್ವಂತಿ ಕಷ್ಟಂ ಅರ್ಥಾರ್ಥಿನೋ ನರಾಃ**

– ಬೃಹತ್ಕಥಾಮಂಜರೀ

ಹಣ ಬೇಕೆಂಬುವ ಜನರು ಎಂಥೆಂಥ ಕಷ್ಟಕಾರ್ಯಗಳನ್ನು ತಾನೇ ಮಾಡುವುದಿಲ್ಲ?

**ಕಿಮದೇಯಂ ಕೃತಜ್ಞಾನಾಂ ಅನುಕ್ತ್ವೋಪಕಾರಿಣಾಮ್**

– ಭಾರತಮಂಜರೀ 1.450

ಮಾತಾಡದೆಯೇ ಉಪಕಾರ ಮಾಡುವ ಕೃತಜ್ಞತೆಯುಳ್ಳವರಿಗೆ ಕೊಡಬಾರದ್ದೇನು?

**ಕಿಮದೇಯಂ ಮಹಾತ್ಮನಾಮ್**

– ಬೃಹತ್ಕಥಾಮಂಜರೀ

ಮಹಾತ್ಮರಿಗೆ ಕೊಡಬಾರದ ವಸ್ತುವಾವುದು?

**ಕಿಮಸಾಧ್ಯಂ ಮಹಾತ್ಮನಾಮ್**

– ರಾಮಾಯಣಮಂಜರೀ

ಮಹಾತ್ಮರಿಗೆ ಅಸಾಧ್ಯವಾವುದು?

**ಕಿಮಸಾಧ್ಯಂ ಸ್ಫುರದ್ಧಾಮ್ನಾಂ ಮಂತ್ರಾಣಾಂ ವೀರ್ಯಶಾಲಿನಾಮ್**

– ಬೃಹತ್ಕಥಾಮಂಜರೀ

ಹೊಳೆವ ತೇಜಸ್ಸುಳ್ಳ ಶಕ್ತಿಶಾಲಿಗಳ ಮಂತ್ರಗಳಿಗೆ ಅಸಾಧ್ಯವಾದದ್ದು ಏನು?

**ಕಿಲ್ಬಿಷಾಪಹ್ನವಕ್ರೌರ್ಯಧೀರಾ ನಾರ್ಯೋ ಹಿ ದುರ್ಜಯಾಃ**

– ಬೃಹತ್ಕಥಾಮಂಜರೀ

ಪಾಪಕೃತ್ಯವನ್ನು ಮರೆಮಾಚುವ ಕ್ರೂರ ಕೆಲಸದಲ್ಲಿ ಧೀರರಾದ ನಾರಿಯರನ್ನು ಗೆಲ್ಲುವುದು ಕಷ್ಟ.

**ಕುತೋ ವಾ ಹೀನಪುಣ್ಯಾನಾಂ ಸಂಕಲ್ಪಾಃ ಫಲಯೋಗಿನಃ**

– ಬೃಹತ್ಕಥಾಮಂಜರೀ

ಅದೃಷ್ಟವಿಲ್ಲದವರ ಸಂಕಲ್ಪಗಳು ಫಲ ನೀಡುವುದು ಹೇಗೆ ?

**ಕುಲಭೇದೇ ಹಿ ವಿವೃತೇ ಪ್ರಯಾಂತ್ಯೇವ ವಿಭೂತಯಃ**

– ಭಾರತಮಂಜರೀ 1.1177

ಮನೆತನವು ಒಡೆದುಹೋದಾಗ ಐಶ್ವರ್ಯವು ಹೊರಟೇ ಹೋಗುತ್ತದೆ.

**ಕುಲಾಭಿಮಾನಾಭರಣಾಃ ಶೋಭಂತೇ ಹಿ ಸತಾಂ ಶ್ರಿಯಃ**

– ಭಾರತಮಂಜರೀ 5.345

ಕುಲಾಭಿಮಾನಕ್ಕೆ ಆಭರಣವಾಗಿರುವ ಸಜ್ಜನರ ಸಂಪತ್ತುಗಳು ಶೋಭಿಸುತ್ತವೆ.

**ಕುಲೀನಾನಾಂ ನಿತ್ಯಂ ಹಿ ಶ್ರೀಃ ಪರಾಙ್ಮುಖೀ**

– ಬೃಹತ್ಕಥಾಮಂಜರೀ

ಸತ್ಕುಲಪ್ರಸೂತರಿಗೆ ಐಶ್ವರ್ಯವು ನಿತ್ಯವೂ ಪರಾಙ್ಮುಖವಾಗಿರುತ್ತದೆ.

**ಕುಲೀನೈರ್ಹಿ ಪ್ರೀತಿಃ ಪರ್ಯಂತನಿಶ್ಚಲಾ**

– ಬೃಹತ್ಕಥಾಮಂಜರೀ

ಸದ್ವಂಶದಲ್ಲಿ ಹುಟ್ಟಿದವರೊಂದಿಗೆ ಮಾಡಿದ ಪ್ರೀತಿಯು ಕೊನೆಯವರೆಗೂ ಕಡಿಮೆಯಾಗುವುದಿಲ್ಲ.

**ಕೃಚ್ಛ್ರೇ ತ್ಯಕ್ತ್ವಾಪಿ ಸರ್ವಸ್ವಂ ರಕ್ಷೇಚ್ಚಾತ್ಮಾನಮಾತ್ಮವಿತ್**

– ರಾಮಾಯಣಮಂಜರೀ

ಅತ್ಯಂತ ದುರವಸ್ಥೆಯಲ್ಲಿಯೂ ಬೇರೆಲ್ಲವನ್ನು ಬಿಟ್ಟು ಆತ್ಮಜ್ಞಾನಿಯು ತನ್ನನ್ನು ಕಾಪಾಡಿಕೊಳ್ಳಬೇಕು.

**ಕೃತಘ್ನಾಃ ಭೂಮಿಪಾಃ ಸತ್ಯಮ್**

– ಬೃಹತ್ಕಥಾಮಂಜರೀ

ರಾಜರು ನಿಜಕ್ಕೂ ಕೃತಘ್ನರು.

**ಕೇವಲಸತ್ಯೇನ ನ ಭವಂತಿ ಹಿತಶ್ರಿಯಃ**

– ಬೃಹತ್ಕಥಾಮಂಜರೀ

ಬರಿಯ ಸತ್ಯದಿಂದ ಹಿತವಾಗಲಿ, ಸಿರಿಯಾಗಲಿ ಉಂಟಾಗುವುದಿಲ್ಲ.

**ಕೋ ಜಾನಾತಿ ಪರೇ ಲೋಕೇ ಕಸ್ಯ ಕಿಂ ನು ಭವಿಷ್ಯತಿ?**

– ಬೃಹತ್ಕಥಾಮಂಜರೀ

ಬೇರೆಯ ಲೋಕದಲ್ಲಿ ಯಾರಿಗೆ ಏನಾಗಲಿದೆ ಎಂಬುದನ್ನು ತಿಳಿದವರಾರು?

**ಕೋ ಜಾನಾತಿ ಭವಾಂಭೋಧಿಬುದ್ಬುಧಸ್ಯಾಯುಷೋ ಗತಿಮ್**

– ರಾಮಾಯಣಮಂಜರೀ

ಭವಸಾಗರದ ನೀರಗುಳ್ಳೆಯಂತಿರುವ ಜೀವಿತದ ಹಾದಿಯನ್ನು ಬಲ್ಲವರಾರು?

**ಕೋ ನಾಮ ಗುಣಿನಾಂ ಸಂಘಾನ್ನ ಸ್ಯಾತ್ ಆನಂದನಿರ್ಝರಃ**

– ಭಾರತಮಂಜರೀ 3.1083

ಗುಣವಂತರ ಗುಂಪಿನಿಂದ ಉಂಟಾಗದ ಆನಂದದ ಬುಗ್ಗೆಯು ಅದಾವುದು?

**ಕೋ ನು ವೈರಮನಿರ್ಯಾತ್ಯ ಸಂತಪ್ತಃ ಸ್ವಪಿತಿ ಶ್ವಸನ್**

– ಭಾರತಮಂಜರೀ 4.107

ಕುಪಿತನಾದ ಯಾರು ತಾನೇ ಸೇಡನ್ನು ತೀರಿಸದೇ ಸುಮ್ಮನೆ ಉಸಿರಾಡುತ್ತ ಬಿದ್ದುಕೊಂಡಿದ್ದಾನು?

**ಕೋಪನಾಃ ಕಾತರಾಃ ಕ್ಷುದ್ರಾ ಭವಂತಿ ವಿಭವೇ ಖಲಾಃ**

– ರಾಮಾಯಣಮಂಜರೀ

ಐಶ್ವರ್ಯ ದೊರೆತಾಗ ದುಷ್ಟರು ಕೋಪಿಷ್ಠರೂ, ಪುಕ್ಕಲೂ ಮತ್ತು ತುಚ್ಛರೂ ಆಗುತ್ತಾರೆ.

**ಕೋಪಶ್ಚಿರಂ ನ ಹಿ ಮಹಾತ್ಮನಾಮ್**

– ಭಾರತಮಂಜರೀ 3.794

ಮಹಾತ್ಮರ ಕೋಪವು ಹೆಚ್ಚು ಹೊತ್ತು ಇರುವುದಿಲ್ಲ.

**ಕೋ ವಾ ಲಕ್ಷ್ಮ್ಯಾ ನ ಮಾದ್ಯತಿ?**

– ಭಾರತಮಂಜರೀ 1.140

ಐಶ್ವರ್ಯದಿಂದ ಮತ್ತೇರದವನು ಯಾರು?

**ಕೋ ವಾ ವಿಧಾತೃಚರಿತಂ ಪರಿಮಾರ್ಷ್ಟುಮೀಶಃ?**

– ಭಾರತಮಂಜರೀ 1.575

ವಿಧಿಯ ನಡವಳಿಕೆಯನ್ನು ಅಳಿಸಿ ಹಾಕಲು ಸಮರ್ಥರಾದವರಾರು?

**ಕೋ ಹಿ ಸಾಂತ್ವೈರ್ನ ತುಷ್ಯತಿ?**

– ಭಾರತಮಂಜರೀ 13.1725

ಸಮಾಧಾನದ ಮಾತುಗಳಿಂದ ತೃಪ್ತಿ ಹೊಂದದವನಾರು?

**ಕೋ ಹಿ ಕಾಮೇನ ನ ಖಲೀಕೃತಃ?**

– ಬೃಹತ್ಕಥಾಮಂಜರೀ

ಕಾಮನಿಂದ ಕೆಟ್ಟುಹೋಗದವನಾರು?

**ಕೋ ಹಿ ಜಾನೀತೇ ಚರಿತಂ ಪ್ರೌಢಮಂತ್ರಿಣಾಮ್?**

– ಬೃಹತ್ಕಥಾಮಂಜರೀ

ನುರಿತ ಮಂತ್ರಿಗಳ ನಡಾವಳಿಯನ್ನು ತಿಳಿದವರಾರು?

**ಕೋ ಹಿ ನಾಮ ಸ ಸಂಕಲ್ಪೋ ಧೀಮತಾಂ ಯೋ ನ ಸಿಧ್ಯತಿ**

– ಬೃಹತ್ಕಥಾಮಂಜರೀ

ಧೀಮಂತರ ಅದಾವ ಸಂಕಲ್ಪವು ಸಿದ್ಧಿಸದೇ ಇದ್ದೀತು?

**ಕೋ ಹಿ ನಿದ್ರಾಂ ಸಮಾಯಾತಿ ಮೃತ್ಯುದಂತಾಂತರೇ ಸ್ಥಿತಃ**

– ಬೃಹತ್ಕಥಾಮಂಜರೀ

ಮೃತ್ಯುವಿನ ದವಡೆಗೆ ಸಿಲುಕಿರುವ ಅದಾವನು ತಾನೇ ನಿದ್ದೆ ಮಾಡಿಯಾನು?

**ಕೋ ಹಿ ಪಾತಯಿತುಂ ಶಕ್ತಃ ಸುಖೇನ ಭವಪಾದಪಮ್**

– ಬೃಹತ್ಕಥಾಮಂಜರೀ

ಸಂಸಾರವೃಕ್ಷವನ್ನು ಸುಲಭವಾಗಿ ಬೀಳಿಸಬಲ್ಲವನಾರು?

**ಕೋ ಹಿ ಶಕ್ತೋ ಧರ್ತುಂ ರಾಗವತೀಮನಃ**

– ಬೃಹತ್ಕಥಾಮಂಜರೀ

ಅನುರಾಗವುಳ್ಳವಳ ಮನಸ್ಸನ್ನು ತಡೆಹಿಡಿದಿರಲು ಯಾರಿಗೆ ಸಾಧ್ಯ?

**ಕೋ ಹಿ ಸಹತೇ ಸಹಸಾ ದಯಿತಾಕ್ಷಯಮ್**

– ಬೃಹತ್ಕಥಾಮಂಜರೀ

ಪ್ರಿಯತಮಳು ಇದ್ದಕ್ಕಿದ್ದಂತೆ ಇಲ್ಲದಂತಾದರೆ ಸಹಿಸಬಲ್ಲವರಾರು?

**ಕೋ ಹಿ ಸದ್ಭಾವೇನ ನ ತುಷ್ಯತಿ ?**

– ಬೃಹತ್ಕಥಾಮಂಜರೀ

ಸದ್ಭಾವನೆಯಿಂದ ಸಂತುಷ್ಟನಾಗದವನಾರು?

**ಕೋ ಹಿ ಸುಪ್ತೇನ ಸಿಂಹೇನ ಕೃತಕಂಠಗ್ರಹಃ ಸ್ವಪೇತ್ ?**

– ಬೃಹತ್ಕಥಾಮಂಜರೀ

ಮಲಗಿದ ಸಿಂಹವನ್ನು ಅಪ್ಪಿಕೊಂಡು ಮಲಗಬಲ್ಲವನಾರು?

**ಕೋ ಹಿ ಹಸ್ತಾತ್ ಪರಿತ್ಯಜ್ಯ ಕುರ್ಯಾದನ್ವೇಷಣಶ್ರಮಮ್?**

**– ಬೃಹತ್ಕಥಾಮಂಜರೀ**

ಯಾರಾದರೂ ಕೈಯಲ್ಲಿರುವುದನ್ನು ಕೈಬಿಟ್ಟು ಅದನ್ನೇ ಮತ್ತೆ ಹುಡುಕುವ ಶ್ರಮ ವಹಿಸುವರೇನು?

**ಕೋ ಹಿ ಹಸ್ತಾವಚೇಯೇಷು ಪದ್ಮೇಷು ಪರಶುಂ ಕ್ಷಿಪೇತ್?**

**– ಭಾರತಮಂಜರೀ 5.10**

ಕೈಯಿಂದ ಕೊಯ್ಯಬಹುದಾದ ಕಮಲಕ್ಕೆ ಕೊಡಲಿಯನ್ನು ಯಾರಾದರೂ ಬಳಸುವರೇನು?

**ಕ್ರತುರ್ನಾಮ ಬಾಹ್ಯದ್ರವಿಣಡಂಬರಃ**

**– ಬೃಹತ್ಕಥಾಮಂಜರೀ**

ಯಾಗವೆಂಬುದು ಹೊರಗಡೆ ಹಣ ವೆಚ್ಚಮಾಡುವ ಆಡಂಬರವಷ್ಟೇ.

**ಕ್ರೋಧೋ ಮೃತ್ಯುಃ ಶರೀರಿಣಾಮ್**

**– ಭಾರತಮಂಜರೀ 14.101**

ಮನುಷ್ಯರಿಗೆ ಕ್ರೋಧವೇ ಸಾವು.

**ಕ್ವ ವಿನಾ ಸಾಮ ಸಿದ್ಧಯಃ ?**

**– ಭಾರತಮಂಜರೀ 5.12**

ಒಳ್ಳೆಯ ಮಾತುಗಳಿಲ್ಲದೇ ಕಾರ್ಯಸಿದ್ಧಿಯಾಗುವುದುಂಟೇ?

**ಕ್ಷತ್ರಿಯಸ್ಯ ವ್ರತಂ ಧೈರ್ಯಂ ದ್ವಿಜಾನಾಂ ಭೂಷಣಂ ಕೃಪಾ**

**– ಭಾರತಮಂಜರೀ 1.89**

ಧೈರ್ಯವೇ ಕ್ಷತ್ರಿಯರ ವ್ರತ ; ಅನುಕಂಪೆಯೇ ಬ್ರಾಹ್ಮಣರಿಗೆ ಅಲಂಕಾರ.

**ಕ್ಷಾತ್ರಂ ಬಲಂ ನಾತಿಬಲಂ ಬ್ರಹ್ಮತೇಜೋ ಮಹದ್ಬಲಮ್**

**– ರಾಮಾಯಣಮಂಜರೀ**

ಕ್ಷಾತ್ರ ತೇಜಸ್ಸು ದೊಡ್ಡ ಶಕ್ತಿಯಲ್ಲ ; ಬ್ರಹ್ಮ ತೇಜಸ್ಸೇ ಮಹಾಶಕ್ತಿ

**ಕ್ಷೀಣಮಾಯುಸ್ತು ದುರ್ಲಭಮ್**

– ಬೃಹತ್ಕಥಾಮಂಜರೀ

ಗತಿಸಿದ ಆಯುಷ್ಯವು ಮತ್ತೆ ಸಿಕ್ಕದು.

**ಖಲಾನಾಂ ದೋಷಸಾರಾಣಾಂ ಪ್ರೀತಿಃ ಶ್ರೀರಿವ ಚಂಚಲಾ**

– ರಾಮಾಯಣಮಂಜರೀ

ದೋಷದಿಂದ ತುಂಬಿರುವ ದುಷ್ಟರ ಪ್ರೀತಿಯು ಲಕ್ಷ್ಮಿಯಂತೆಯೇ ಚಂಚಲ.

**ಗಣ್ಯತೇ ಕೇನ ಸರ್ಪಾಣಾಂ ಕರೇಣ ರದನಾವಲೀ?**

– ಬೃಹತ್ಕಥಾಮಂಜರೀ

ಹಾವುಗಳ ಹಲ್ಲುಗಳ ಸಾಲನ್ನು ಕೈಯಿಂದ ಎಣಿಸುವವರಾರು?

**ಗತಪ್ರಾಣೋ ಧನ್ಯೋ ನ ತು ಜರಾರ್ದಿತಃ**

– ಭಾರತಮಂಜರೀ 1.348

ಸತ್ತವನೇ ಪುಣ್ಯವಂತ ; ಮುದಿತನದಿಂದ ಹಿಂಸೆಪಟ್ಟುಕೊಳ್ಳುತ್ತಿರುವವನಲ್ಲ.

**ಗುಣಲುಬ್ಧಾ ವಿರುದ್ಧೇऽಪಿ ಸಾದರಾ ಏವ ಸಾಧವಃ**

– ರಾಮಾಯಣಮಂಜರೀ

ಗುಣಗ್ರಾಹಿಗಳಾದ ಸಾಧುಗಳು ಶತ್ರುವಿನ ಬಗ್ಗೆಯೂ ಆದರಭಾವವುಳ್ಳವರಾಗಿರುತ್ತಾರೆ.

**ಗುಣಸಂಗೇನ ಕೋ ಹಿ ನಾಮ ನ ತುಷ್ಯತಿ?**

– ಬೃಹತ್ಕಥಾಮಂಜರೀ

ಗುಣಗಳ ಸಂಪರ್ಕದಿಂದ ಸಂತೋಷಗೊಳ್ಳದವನಾರು?

**ಗುಣಿನಾಂ ಭವ್ಯವಪುಷಾಂ ಪೃಥಿವೀ ನಿಜಮಂದಿರಮ್**

– ಬೃಹತ್ಕಥಾಮಂಜರೀ

ಭವ್ಯ ಶರೀರವುಳ್ಳ ಗುಣವಂತರಿಗೆ ಭೂಮಿಯೆಲ್ಲವೂ ಸ್ವಂತ ಮನೆಯೇ.

**ಗುಣ್ಯೈಃ ಕೋ ನ ವಶೀಕೃತಃ ?**

– ಬೃಹತ್ಕಥಾಮಂಜರೀ

ಗುಣಗಳಿಂದ ವಶನಾಗದವನಾರು?

**ಗುರುರ್ಹಿ ಧನವಾನಗ್ರೇ ಸರ್ವವಿದ್ಯಾವತಾಮಪಿ**

– ಭಾರತಮಂಜರೀ 2.18

ವಿದ್ಯಾವಂತರೆಲ್ಲರಿಗಿಂತ ಮೊದಲಿಗೆ ಹಣವಂತನೇ ದೊಡ್ಡವನು.

**ಗೂಢಂ ಹಿ ಮಹತಾಂ ಜನ್ಮ ಪರಿಚ್ಛೇತ್ತುಂ ಕ ಈಶ್ವರಃ**

– ಭಾರತಮಂಜರೀ 1.687

ಮಹಾತ್ಮರ ಜನ್ಮವು ರಹಸ್ಯವಾದದ್ದು ಅದನ್ನು ವಿವೇಚಿಸಬಲ್ಲವರಾರು?

**ಗೋಕರ್ಣಶಿಥಿಲಾಃ ಸತ್ಯೇ ನ ಭವಂತಿ ವಿಪಶ್ಚಿತಃ**

– ಭಾರತಮಂಜರೀ 2.425

ಹಸುವಿನ ಕಿವಿಯಂತೆ ಸಡಿಲರಾದ ಜಾಣರು ಸತ್ಯಕ್ಕೆ ಅಂಟಿಕೊಂಡಿರುವುದಿಲ್ಲ.

**ಗೋಪ್ಯಂತೇ ವಿಪುಲಾಮೋದಾಃ ಕೇನ ಕಸ್ತೂರಿಕಾಮೃಗಾಃ ?**

– ಭಾರತಮಂಜರೀ 3.258

ಅತಿಶಯವಾದ ಪರಿಮಳವುಳ್ಳ ಕಸ್ತೂರೀಮೃಗಗಳನ್ನು ಬಚ್ಚಿಡಲು ಯಾರಿಗೆ ಸಾಧ್ಯ?

**ಘೋರಃ ಶತ್ರುಃ ಶರೀರಸ್ಥಃ ಪುಂಸಾಂ ಕ್ರೋಧಾನಲಃ ಕಿಲ**

– ಭಾರತಮಂಜರೀ 3.1465

ಮನುಷ್ಯರ ಶರೀರದಲ್ಲಿಯೇ ಇರುವ ಕೋಪವೆಂಬ ಬೆಂಕಿಯೇ ಭಯಂಕರ ಶತ್ರುವಲ್ಲವೆ !

**ಘೋರಾಪಕಾರೇ ಕಃ ಶತ್ರೌ ರಣೇ ನ್ಯಾಯಮುಪೇಕ್ಷತೇ?**

– ಭಾರತಮಂಜರೀ 7.752

ಶತ್ರುವು ಘೋರ ಅಪರಾಧವನ್ನೆಸಗಿರುವಾಗ ರಣರಂಗದಲ್ಲಿ ನ್ಯಾಯವನ್ನು ಉದಾಸೀನ ಮಾಡುವರಾರು?

**ಘೋಷಂ ಗ್ರಾಮಂ ಪುರಂ ರಾಷ್ಟ್ರಂ ಭಕ್ಷಯಂತ್ಯಧಿಕಾರಿಣಃ**

– ಭಾರತಮಂಜರೀ 13.353

ಹಟ್ಟಿಯನ್ನು, ಹಳ್ಳಿಯನ್ನು, ಪಟ್ಟಣವನ್ನು ಮತ್ತು ಕಡೆಗೆ ರಾಷ್ಟ್ರವನ್ನೂ ಅಧಿಕಾರಿಗಳು ತಿಂದುಹಾಕುತ್ತಾರೆ.

**ಚಿರಗೂಢ ಪರಿಕ್ಲೇಶವಿನಾಶಃ ಸತ್ಸಮಾಗಮಃ**

– ರಾಮಾಯಣಮಂಜರೀ

ಸಜ್ಜನರ ಸಮಾಗಮದಿಂದ ಬಹುಕಾಲದಿಂದ ಗೂಢವಾಗಿದ್ದ ಕಷ್ಟಕೋಟಲೆಗಳ ವಿನಾಶವು ಉಂಟಾಗುತ್ತದೆ.

**ಚೂಡಾಮಣಿಃ ಶಿರಃಸ್ಥೋऽಪಿ ದೃಶ್ಯತೇ ನ ಸ್ವಚಕ್ಷುಷಾ**

– ರಾಮಾಯಣಮಂಜರೀ

ಚೂಡಾಮಣಿಯು ತಲೆಯ ಮೇಲೇ ಇದ್ದರೂ ಸ್ವಂತ ಕಣ್ಣಿನಿಂದ ಕಾಣ ಲಾಗುವುದಿಲ್ಲ.

**ಚೇತಃ ಚಿತ್ತಂ ಹಿ ಪಶ್ಯತಿ**

– ಬೃಹತ್ಕಥಾಮಂಜರೀ

ಮನಸ್ಸು ಮನಸ್ಸನ್ನೇ ನೋಡುತ್ತದೆ.

**ಛನ್ನದೋಷಂ ಗುಣಂ ವಕ್ತಿ ಯಸ್ಸ ಮಿತ್ರಮುಖೋ ರಿಪುಃ**

– ರಾಮಾಯಣಮಂಜರೀ

ಮರೆಯಾಗಿರುವ ದೋಷವನ್ನು ಗುಣವೆಂದು ಬಣ್ಣಿಸುವವನು ಮಿತ್ರನ ವೇಷದ ಶತ್ರುವೇ ಸರಿ.

**ಛನ್ನಾನಾಂ ಕೋ ಹಿ ಜಾನಾತಿ ತೇಜಸಃ ಸಾರಫಲ್ಗುತಾಮ್**

– ಭಾರತಮಂಜರೀ 1.1065

ಮಾರುವೇಷದಲ್ಲಿರುವವರ ಪರಾಕ್ರಮದ ಬಲಾಬಲಗಳನ್ನು ಅರಿಯಬಲ್ಲವನು ಯಾರು?

**ಛಲೇನ ಪಾತಯ ರಿಪೂನ್ ಸರ್ವೋಪಾಯ ಪರಿಕ್ಷಯೇ**

– ಬೃಹತ್ಕಥಾಮಂಜರೀ

ಉಪಾಯಗಳೆಲ್ಲವೂ ಮುಗಿದ ಮೇಲೆ ಶತ್ರುಗಳನ್ನು ಮೋಸದಿಂದ ಕೆಡವು.

**ಜನಾನುರಾಗಜಾತಾ ಹಿ ಶ್ರೀಃ ವಂಶಮನುಧಾವತಿ**

– ಭಾರತಮಂಜರೀ 1.715

ಪ್ರಜೆಗಳ ಪ್ರೀತಿಯಿಂದ ಉಂಟಾದ ಐಶ್ವರ್ಯವು ವಂಶಪರಂಪರೆಯಲ್ಲಿ ಉಳಿದು ಬರುತ್ತದೆ.

**ಜನಾಪವಾದನಿಂದ್ಯಾ ಶ್ರೀಃ ಕಸ್ಯ ಪ್ರೀಣಾತಿ ಮಾನಸಮ್**

– ರಾಮಾಯಣಮಂಜರೀ

ಜನಾಪವಾದದಿಂದ ಥೂತ್ಕರಿಸಲ್ಪಟ್ಟ ಐಶ್ವರ್ಯವು ಯಾರ ಮನಸ್ಸನ್ನು ಸಂತೃಪ್ತಿಗೊಳಿಸೀತು?

**ಜರಾ ಹಿ ನಾಮ ರೂಪಸ್ಯ ಕಮಲಸ್ಯೇವ ಚಂದ್ರಿಕಾ**

– ಬೃಹತ್ಕಥಾಮಂಜರೀ

ಮುಪ್ಪು ಎಂಬುದು ಸೌಂದರ್ಯಕ್ಕೆ, ಕಮಲಕ್ಕೆ ಬೆಳದಿಂಗಳಿನಂತೆ.

**ಜಾತ್ಯೇವ ಸ್ವಜನೇ ಪ್ರೀತಿಃ ಜಂತೋರವ್ಯಭಿಚಾರಿಣೀ**

– ರಾಮಾಯಣಮಂಜರೀ

ಎಲ್ಲ ಪ್ರಾಣಿಗಳಿಗೂ ಸ್ವಜನ ಪ್ರೀತಿಯು ತಪ್ಪದೇ ಹುಟ್ಟಿನಿಂದಲೇ ಬಂದಿರುತ್ತದೆ.

**ಜಾಮಿಶ್ವಶ್ರೂಜನಾಯತ್ತಂ ವಿಷಮಂ ಭರ್ತೃಮಂದಿರಮ್**

– ಬೃಹತ್ಕಥಾಮಂಜರೀ

ಅತ್ತೆ ಮತ್ತು ಹೆಣ್ಣುಮಕ್ಕಳ ವಶದಲ್ಲಿರುವ ಗಂಡನ ಮನೆಯು ದುಃಖದಾಯಕ.

**ಜಿತಾ ಏವ ಹಿ ಜೀಯಂತೇ ನ ಜಯಂತಿ ಜಿತಾಃ ಕ್ವಚಿತ್**

– ಭಾರತಮಂಜರೀ 4.313

ಸೋತವರು ಸೋಲುವರೇ ಹೊರತು ಅವರು ಎಂದೂ ಗೆಲ್ಲುವುದಿಲ್ಲ.

**ಜೀವನ್ ಪ್ರಿಯಾಯಾಃ ಪುರುಷಃ ಕಃ ಸಹೇತ ಪರಾಭವಮ್**

**– ಭಾರತಮಂಜರೀ 4.115**

ಬದುಕಿರುವ ಯಾವನು ತಾನೇ ಪ್ರಿಯತಮೆಯ ಸೋಲನ್ನು ಸಹಿಸಿಯಾನು?

**ಜೀವಿತಂ ಹಿ ಕಲೇಃ ಸ್ತ್ರಿಯಃ**

**– ಭಾರತಮಂಜರೀ 1.1161**

ಹೆಂಗಸರೇ ಕಲಿಕಾಲದ ಜೀವವಷ್ಟೆ!

**ಜೀವತಾಂ ಭವಂತಿ ಶುಭಸಂಪದಃ**

**– ಬೃಹತ್ಕಥಾಮಂಜರೀ**

ಬದುಕುಳಿದವರಿಗೆ ಶುಭಸಂಪತ್ತುಗಳು ಉಂಟಾಗುತ್ತವೆ.

**ಜೀವತಾಂ ಸಂಗಮೋ ನಾಮ ಮನ್ಯೇಽಹಂ ಕಿಲ ಜಾಯತೇ**

**– ಬೃಹತ್ಕಥಾಮಂಜರೀ**

ಬದುಕಿದ್ದರೆ ಸಮಾಗಮವು ಉಂಟಾಗುತ್ತದೆಯೆಂದು ನನ್ನ ಅನಿಸಿಕೆ.

**ಜ್ಞಾತಿಭೋಗೇನ ವಿಭೂಷ್ಯಂತೇ ಹಿ ಭೂತಯಃ**

**– ಭಾರತಮಂಜರೀ 2.240**

ಸಂಬಂಧಿಕರು ಅನುಭವಿಸುವುದರಿಂದ ಐಶ್ವರ್ಯಕ್ಕೆ ಮೆರುಗು ಉಂಟಾಗುತ್ತದೆ.

**ಜ್ಞಾನಂ ಹಿ ತಪಸಾಂ ಫಲಮ್**

**– ಭಾರತಮಂಜರೀ 13.1704**

ಜ್ಞಾನವೇ ತಪಸ್ಸಿನ ಫಲ.

**ಜ್ಯೇಷ್ಠಃ ಪ್ರಾಯಃ ಪ್ರಿಯಃ ಪುಂಸಾಂ ಕನೀಯಾಂಸಶ್ಚ ಯೋಷಿತಾಮ್**

**– ರಾಮಾಯಣಮಂಜರೀ**

ಹಿರಿಯವನು ಗಂಡಸರಿಗೂ ಮತ್ತು ಕಿರಿಯವನು ಹೆಂಗಸರಿಗೂ ಹೆಚ್ಚು ಇಷ್ಟ.

**ತಪಃ ಸಾಧ್ಯಾ ವಿಭೂತಯಃ**

**– ಭಾರತಮಂಜರೀ 3.23**

ಸಿದ್ಧಿಗಳನ್ನು ತಪಸ್ಸಿನಿಂದ ಸಾಧಿಸಬಹುದು.

**ತರಂಗಲೋಲಾನ್ಯಾಯೂಂಷಿ ಕೀರ್ತಿಃ ಕಲ್ಪಾಂತಸಾಕ್ಷಿಣೀ**

– ಭಾರತಮಂಜರೀ 3.1143

ಆಯುಷ್ಯವು ಅಲೆಯಂತೆ ಅಶಾಶ್ವತವಾದದ್ದು; ಕೀರ್ತಿಯು ಪ್ರಳಯದವರೆಗೂ ಸ್ಥಿರವಾದುದು.

**ತಿತಿಕ್ಷಾ ಶೋಭತೇ ಸತ್ಯವೀರ್ಯ ವಿಕ್ರಮಶಾಲಿನಾಮ್**

– ರಾಮಾಯಣಮಂಜರೀ

ನಿಜವಾದ ಪರಾಕ್ರಮವುಳ್ಳವರಿಗೆ ಸಹನೆಯು ಶೋಭಿಸುತ್ತದೆ.

**ತೀಕ್ಷ್ಣಾನುವರ್ತೀ ಲೋಕೋಽಯಂ ಪೌರುಷೇಣೈವ ಭುಜ್ಯತೇ**

– ರಾಮಾಯಣಮಂಜರೀ

ಉಗ್ರರನ್ನು ಹಿಂಬಾಲಿಸುವವರು ಈ ಜನರು ; ಪೌರುಷದಿಂದಲೇ ಸುಖ ಅನುಭವಿಸಬೇಕು.

**ತುಷ್ಟಿರುತ್ಸೇಕಕಾರಿಣೀ**

– ಭಾರತಮಂಜರೀ 13.1033

ಸಂತೋಷವು ಕೊಬ್ಬನ್ನುಂಟುಮಾಡುವಂಥದು.

**ತೃಣಂ ಬಾಂಧವಪಕ್ಷೋ ಹಿ ಭರ್ತೃಸ್ನೇಹೇನ ಯೋಷಿತಾಮ್**

– ಭಾರತಮಂಜರೀ 1.774

ಪತಿಯ ಪ್ರೀತಿಯಿಂದಾಗಿ ಹೆಂಗಸರಿಗೆ ಬಂಧುಗಳು ಹುಲ್ಲಿಗೆ ಸಮ.

**ತೃಣೇಽಪಿ ಚಲತಸ್ತ್ರಾಸೋ ನಿಸ್ಸಹಾಯಸ್ಯ ಜಾಯತೇ**

– ರಾಮಾಯಣಮಂಜರೀ

ಶಕ್ತಿಯಿಲ್ಲದವನಿಗೆ ನಡೆಯುವಾಗ ಹುಲ್ಲಿನಿಂದಲೂ ಹಿಂಸೆಯುಂಟಾಗುತ್ತದೆ.

**ತೇಜಸಾ ಸಹ ನಶ್ಯಂತಿ ಸ್ತ್ರೀಜಿತಾನಾಂ ಹಿ ಬುದ್ಧಯಃ**

– ಭಾರತಮಂಜರೀ 1.423

ಹೆಂಗಸರಿಗೆ ಸೋತವರ ಬುದ್ಧಿಗಳು ಅವರ ಪರಾಕ್ರಮದ ಜೊತೆಯೇ ನಾಶಹೊಂದುತ್ತವೆ.

**ತೋಷಾಯ ಹಿ ವಿದಗ್ಧಾನಾಂ ಸ್ವಭಾವಸುಭಗೋ ಜನಃ**

– ಭಾರತಮಂಜರೀ 4.134

ಸಹಜ ಸುಂದರರಾದವರು ರಸಿಕರ ಸಂತೋಷಕ್ಕೆ ಕಾರಣರಾಗುವರು.

**ತ್ಯಕ್ತ್ವಾ ಲಕ್ಷ್ಮೀಂ ಸ್ವಯಂ ಪ್ರಾಪ್ತಾಂ ಅನುತಾಪಂ ಭಜೇನ್ನ ಕಃ ?**

– ಬೃಹತ್ಕಥಾಮಂಜರೀ

ತಾನಾಗಿಯೇ ಬಂದ ಲಕ್ಷ್ಮಿಯನ್ನು ತ್ಯಜಿಸಿದ ಯಾರು ತಾನೇ ಪಶ್ಚಾತ್ತಾಪ ಪಡುವುದಿಲ್ಲ?

**ತ್ಯಜಂತಿ ಜೀವಿತಂ ಕಾಲೇ ಮರ್ಯಾದಾಂ ನ ತು ಮಾನಿನಃ**

– ಭಾರತಮಂಜರೀ 1.464

ಮಾನವಂತರು ಸಮಯದಲ್ಲಿ ಜೀವನವನ್ನಾದರೂ ತೊರೆದಾರು ; ಎಲ್ಲೆಯನ್ನಲ್ಲ.

**ತ್ಯಜಂತ್ಯೇವಾಥವಾ ಭೀತಿಂ ನಿಶ್ಚಯೀಕೃತಮೃತ್ಯವಃ**

– ಭಾರತಮಂಜರೀ 1.846

ಸಾವನ್ನು ತೀರ್ಮಾನ ಮಾಡಿಕೊಂಡವರು ಭಯವನ್ನು ಬಿಟ್ಟೇಬಿಡುತ್ತಾರೆ.

**ತ್ಯಜತೇ ಪ್ರಾಪ್ತಮಮೃತಂ ಯದೇತತ್ ಬುದ್ಧಿಲಾಘವಮ್**

– ಬೃಹತ್ಕಥಾಮಂಜರೀ

ದೊರೆತ ಅಮೃತವನ್ನು ತ್ಯಜಿಸುವುದೆಂಬುದು ತಿಳಿಗೇಡಿತನವಷ್ಟೆ!

**ತ್ಯಜಂತಿ ಸತ್ತ್ವಹೀನಾಂಸ್ತು ದಾರಾ ಅಪಿ ನಿರಾದರಾಃ**

– ಬೃಹತ್ಕಥಾಮಂಜರೀ

ಸತ್ವವಿಲ್ಲದವರನ್ನು ಹೆಂಡತಿಯರೂ ಸಹ ಆದರ ತೋರಿಸದೆ ತ್ಯಜಿಸುತ್ತಾರೆ.

**ತ್ರಾತಾರೋ ಯದಿ ಹಂತಾರೋ ರಕ್ಷಿತಾರೋ ನು ತತ್ರ ಕೇ?**

– ರಾಮಾಯಣಮಂಜರೀ

ಕಾಪಾಡಬೇಕಾದವರೇ ಕೊಲ್ಲುವವರಾದರೆ ಅಲ್ಲಿ ರಕ್ಷಣೆ ನೀಡುವರಾರು?

**ದತ್ತಂ ನೈವ ಪುನರ್ಗ್ರಾಹ್ಯಮ್**

– ಬೃಹತ್ಕಥಾಮಂಜರೀ

ಕೊಟ್ಟದ್ದನ್ನು ಮತ್ತೆ ಹಿಂದಕ್ಕೆ ಪಡೆಯಬಾರದು.

**ದತ್ತಂ ಯತ್ ತತ್ಫಲಂ ಸಮುಪೇಷ್ಯತಿ**

– ಬೃಹತ್ಕಥಾಮಂಜರೀ

ದಾನ ಮಾಡಿದ್ದರ ಫಲವು ದೊರೆತೇ ದೊರೆಯುತ್ತದೆ.

**ದತ್ತಯಾಸಾದ್ಯತೇ ಸರ್ವಂ ಅದತ್ತೇ ಲಭ್ಯತೇ ಕುತಃ**

– ರಾಮಾಯಣಮಂಜರೀ

ದಾನ ನೀಡಿದ್ದರೆ ಎಲ್ಲವನ್ನೂ ಪಡೆಯಬಹುದು ; ಕೊಟ್ಟಿರದಿದ್ದರೆ ಪಡೆವುದು ಹೇಗೆ ?

**ದರ್ಶನಾಂತಂ ಹಿ ಮಹತಾಂ ಪ್ರಿಯೇಷು ಕಲುಷಂ ಮನಃ**

– ರಾಮಾಯಣಮಂಜರೀ

ದೊಡ್ಡವರು ಪ್ರಿಯರಾದವರ ಬಗ್ಗೆ ಕಹಿ ಮನಸ್ಸು ಮಾಡಿಕೊಂಡಿರುವುದು ಭೇಟಿಯಾಗುವವರೆಗೆ ಮಾತ್ರ.

**ದಾನಂ ವೀರಾಣಾಂ ಉತ್ಸಾಹಃ ಸಿದ್ಧಯೇ ಸತಾಮ್**

– ಬೃಹತ್ಕಥಾಮಂಜರೀ

ದಾನವು ವೀರರಿಗೆ ಉತ್ಸಾಹವರ್ಧಕ ; ಸಜ್ಜನರಿಗೆ ಸಿದ್ಧಿಗೆ ಕಾರಣ.

**ದಾನಂ ಹಿ ನಾಮ ಸಂಸಾರೇ ನಿಧಾನಂ ಸರ್ವಸಂಪದಾಮ್**

– ಭಾರತಮಂಜರೀ 3.1733

ಈ ಪ್ರಪಂಚದಲ್ಲಿ ದಾನವೆಂಬುದು ಎಲ್ಲ ಸಂಪತ್ತಿಗೂ ಮೂಲ ಕಾರಣ.

**ದಿವ್ಯಂ ಹಿ ನಯನಂ ಮನಃ**

– ಬೃಹತ್ಕಥಾಮಂಜರೀ

ಮನಸ್ಸೆಂಬುದು ದಿವ್ಯವಾದ ಕಣ್ಣೇ ಸರಿ.

**ದೀರ್ಘದರ್ಶೀ ಶ್ರಿಯಂ ಭುಂಕ್ತೇ**

**– ಬೃಹತ್ಕಥಾಮಂಜರೀ**

ದೂರಾಲೋಚನೆಯುಳ್ಳವರು ಸಂಪತ್ತನ್ನು ಅನುಭವಿಸುತ್ತಾರೆ.

**ದುಃಖಂ ದುಃಖೇ ಹಿ ವರ್ಧತೇ**

**– ಬೃಹತ್ಕಥಾಮಂಜರೀ**

ದುಃಖದಲ್ಲಿದ್ದಾಗ ದುಃಖವು ಹೆಚ್ಚುತ್ತದೆ.

**ದುಃಖಂ ಸಹಂತೇ ಸಾಧ್ವ್ಯೋ ಭರ್ತೃಹಿತೇ ರತಾಃ**

**– ಬೃಹತ್ಕಥಾಮಂಜರೀ**

ಗಂಡನ ಹಿತದಲ್ಲಿ ನಿರತರಾದ ಸತಿಯರು ಕಷ್ಟವನ್ನೆಲ್ಲ ಸಹಿಸುತ್ತಾರೆ.

**ದುಃಖಂ ಹಿ ಜನನೀನಾಂ ಸುದುಃಸಹಮ್**

**– ಬೃಹತ್ಕಥಾಮಂಜರೀ**

ತಾಯಂದಿರ ದುಃಖವು ಸಹಿಸಲಸಾಧ್ಯವಾದುದು.

**ದುಃಖವ್ಯಥಾಂ ನ ಜಾನಾತಿ ಜಡರಾಶಿಃ ಕಥಂ ನು ವಾ?**

**– ಭಾರತಮಂಜರೀ 1.979**

ದಡ್ಡನು ದುಃಖದ ವ್ಯಥೆಯನ್ನು ಅರಿಯುವುದಿಲ್ಲವೆಂಬುದು ಹೇಗೆ ?

**ದುಃಖಾನಲಸ್ಯಾಂತೇ ಭವಂತಿ ಸುಖಿಸಂಪದಃ**

**– ಬೃಹತ್ಕಥಾಮಂಜರೀ**

ದುಃಖದ ಬೇಗೆಯ ಕೊನೆಯಲ್ಲಿ ಸುಖಸಂಪತ್ತುಗಳು ಉಂಟಾಗುತ್ತವೆ.

**ದುಃಖಾ ಹಿ ಖಲಸಂಗತಿಃ**

**– ಬೃಹತ್ಕಥಾಮಂಜರೀ**

ದುಷ್ಟರ ಗೆಳೆತನವು ದುಃಖದಾಯಕ.

**ದುಃಖಿಭ್ಯೋ ಹಿ ಪಲಾಯಂತೇ ಧೈರ್ಯಾಯತ್ತಾ ವಿಭೂತಯಃ**

**– ಭಾರತಮಂಜರೀ 14.8**

ಧೈರ್ಯಕ್ಕೆ ಅಧೀನವಾಗಿರುವ ಐಶ್ವರ್ಯಗಳು ದುಃಖಿತರಿಂದ ಓಡಿಹೋಗುತ್ತವೆ.

**ದುಃಸಹಾ ಗೃಹದುರ್ಗತಿಃ**

– **ಭಾರತಮಂಜರೀ 3.912**

ಮನೆಯೊಳಗಣ ದುಃಸ್ಥಿತಿಯನ್ನು ಸಹಿಸುವುದು ಕಷ್ಟ.

**ದುಃಸಹೋ ವಿರಹಾನಲಃ**

– **ಬೃಹತ್ಕಥಾಮಂಜರೀ**

ವಿರಹದ ಬೇಗೆಯನ್ನು ಸಹಿಸುವುದು ಕಷ್ಟ.

**ದುಗ್ರ್ರಹರತಾನ್ ಅನುನೇತುಂ ಕ ಈಶ್ವರಃ ?**

– **ಬೃಹತ್ಕಥಾಮಂಜರೀ**

ದುರಾಗ್ರಹವುಳ್ಳವರನ್ನು ಸಮಾಧಾನ ಪಡಿಸಬಲ್ಲವರಾರು?

**ದುರ್ಜನಃ ಶ್ಲಾಘತೇ ನಿತ್ಯಂ ಲಜ್ಜತೇ ಯೇನ ಸಜ್ಜನಃ**

– **ರಾಮಾಯಣಮಂಜರೀ**

ಸಜ್ಜನರು ಯಾವುದಕ್ಕೆ ನಾಚಿಕೆಪಟ್ಟುಕೊಳ್ಳುವರೋ ಅದನ್ನೇ ದುಷ್ಟನು ನಿತ್ಯ ಪ್ರಶಂಸಿಸುತ್ತಾನೆ.

**ದುರ್ಜಯಾ ಹಿ ಸದಾ ಘೂಕಾಃ**

– **ಬೃಹತ್ಕಥಾಮಂಜರೀ**

ಗೂಬೆಗಳನ್ನೆಂದೂ ಗೆಲ್ಲಲಾಗುವುದಿಲ್ಲ.

**ದುರ್ನಿವಾರೋ ಹಿ ಮನ್ಮಥಃ**

– **ಬೃಹತ್ಕಥಾಮಂಜರೀ**

ಕಾಮವನ್ನು ತಡೆಯಲು ಸಾಧ್ಯವಾಗದು.

**ದುರ್ಲಂಘ್ಯಾ ಭವಿತವ್ಯತಾ**

– **ರಾಮಾಯಣಮಂಜರೀ**

ವಿಧಿಯನ್ನು ಮೀರಲು ಸಾಧ್ಯವಿಲ್ಲ.

**ದುರ್ಲಭಲಾಭೇಷು ಬಹುವಿಘ್ನಾಯ ಸಿದ್ಧಯಃ**

– **ಬೃಹತ್ಕಥಾಮಂಜರೀ**

ಕಷ್ಟಸಾಧ್ಯವಾದ ಫಲವನ್ನು ಪಡೆಯುವಲ್ಲಿ ಸಿದ್ಧಿಯು ನಾನಾ ವಿಘ್ನಗಳುಳ್ಳದ್ದಾಗಿರುತ್ತದೆ.

**ದುರ್ವಿಜ್ಞೇಯಾ ವಿಧೇರ್ಗತಿಃ**

– ಬೃಹತ್ಕಥಾಮಂಜರೀ

ವಿಧಿಯ ಗತಿಯನ್ನು ಅರಿಯಲು ಸಾಧ್ಯವಿಲ್ಲ.

**ದುರ್ವಿನೀತಾನಾಂ ಶ್ವಭ್ರಪಾತಃ ಸಮೇ ಪಥಿ**

– ಬೃಹತ್ಕಥಾಮಂಜರೀ

ವಿನಯವಿಲ್ಲದವರು ಸರಳ ರಸ್ತೆಯಲ್ಲೂ ಗುಂಡಿಗೆ ಬೀಳುತ್ತಾರೆ.

**ದುಶ್ಚಿಕಿತ್ಸ್ಯಃ ಸ್ಮರಾನಲಃ**

– ಬೃಹತ್ಕಥಾಮಂಜರೀ

ಕಾಮದ ಕಾವಿಗೆ ಚಿಕಿತ್ಸೆಯಿಲ್ಲ.

**ದುಷ್ಟಃ ಸರ್ವವಿನಾಶಕೃತ್**

– ಬೃಹತ್ಕಥಾಮಂಜರೀ

ದುಷ್ಟನು ಎಲ್ಲವನ್ನೂ ಹಾಳುಮಾಡುತ್ತಾನೆ.

**ದೂರಸ್ಥಾ ಏವ ಶೋಭಂತೇ ಪುಷ್ಪಮಾಲಾ ಇವಾಂಗನಾಃ**

– ರಾಮಾಯಣಮಂಜರೀ

ಹೆಂಗಳೆಯರು, ಹೂಮಾಲೆಯಂತೆ, ದೂರದಲ್ಲಿದ್ದಾಗಲೇ ಹೆಚ್ಚು ಶೋಭಿಸುತ್ತಾರೆ.

**ದೃಕ್ಸಂವಿಭಾಗಮಪಿ ನ ವೇಶ್ಯಾ ಕುರ್ವಂತ್ಯಕಾರಣಮ್**

– ಬೃಹತ್ಕಥಾಮಂಜರೀ

ವೇಶ್ಯೆಯರು ನಿಷ್ಕಾರಣವಾಗಿ ಕಣ್ಣೋಟವನ್ನೂ ಹರಿಸುವುದಿಲ್ಲ.

**ದೃಷ್ಟ ಪಂಚನರಾ ನಾರ್ಯಃ ಸ್ವಚ್ಛಂದಾ ನ ಪದಂ ಹ್ರಿಯಃ**

– ಭಾರತಮಂಜರೀ 2.408

ನಾಲ್ಕಾರು ಗಂಡಸರನ್ನು ಕಂಡಿರುವ ಸ್ವೇಚ್ಛಾಚಾರದ ಹೆಂಗಸರಿಗೆ ನಾಚಿಕೆ ಇರುವುದಿಲ್ಲ.

**ದೇಶಕಾಲಾವನಾಲೋಕ್ಯ ಪ್ರಭವಂತಿ ನ ಪಂಡಿತಾಃ**

– ಬೃಹತ್ಕಥಾಮಂಜರೀ

ದೇಶ, ಕಾಲಗಳನ್ನು ಸರಿಯಾಗಿ ಅರಿಯದವರು ಜಾಣರಾಗುವುದಿಲ್ಲ.

**ದೈವಂ ವಾ ಕೇನ ಲಂಘ್ಯತೇ**

– ಬೃಹತ್ಕಥಾಮಂಜರೀ

ದೈವವನ್ನು ಮೀರಬಲ್ಲವರಾರು?

**ದೈವಗತಿಶ್ಚಿತ್ರಾ ಪುರುಷೇಣ ನ ಲಂಘ್ಯತೇ**

– ಬೃಹತ್ಕಥಾಮಂಜರೀ

ದೈವಗತಿಯು ವಿಚಿತ್ರವಾದುದು. ಮನುಷ್ಯಮಾತ್ರರು ಅದನ್ನು ಮೀರಲಾರರು.

**ದೈವಪ್ರೇರಿತ ಚಿತ್ತಾನಾಂ ವಚೋಭಿಃ ಕಾ ಪ್ರತಿಕ್ರಿಯಾ**

– ರಾಮಾಯಣಮಂಜರೀ

ವಿಧಿಯಿಂದ ಪ್ರೇರಿತವಾದ ಮನಸ್ಸುಳ್ಳವರಿಗೆ ಮಾತಿನ ಪ್ರತಿಕ್ರಿಯೆಯೇನು?

**ದೈವವಿಹಿತಂ ಸ್ವಯಂ ಭವತಿ ಸಿದ್ಧಯೇ**

– ಬೃಹತ್ಕಥಾಮಂಜರೀ

ವಿಧಿಯಿಂದ ವಿಹಿತವಾದದ್ದು ತಾನಾಗಿಯೇ ಸಿದ್ಧಿಸುತ್ತದೆ.

**ದೈವಾಯತ್ತಾನಿ ವಿತ್ತಾನಿ ಭುಜಾಧೀನಸ್ತು ವಿಕ್ರಮಃ**

– ರಾಮಾಯಣಮಂಜರೀ

ಹಣವು ಅದೃಷ್ಟಕ್ಕೆ ಅಧೀನ, ಆದರೆ ಪರಾಕ್ರಮವು ತೋಳಿಗೆ ಅಧೀನ.

**ದೈವಾಯತ್ತಾಸ್ತು ಸಿದ್ಧಯಃ**

– ಬೃಹತ್ಕಥಾಮಂಜರೀ

ಸಿದ್ಧಿಗಳೆಲ್ಲವೂ ದೈವಕ್ಕೆ ಅಧೀನವಾಗಿರುವಂಥವು.

**ದೈವೇನ ಲಿಖಿತಂ ಪ್ರಮಾಷ್ಟುಂ ಕಸ್ಯ ಕಃ ಕ್ಷಮಃ ?**

– ಬೃಹತ್ಕಥಾಮಂಜರೀ

ವಿಧಿಯು ಬರೆದಿರುವುದನ್ನು ಯಾರು ಯಾರಿಗೆ ಅಳಿಸಿಹಾಕಲು ಸಾಧ್ಯ?

**ದೋಷಾಸಕ್ತಿ: ಗುಣದ್ವೇಷಃ ಶ್ರೀವಿನಾಶಸ್ಯ ಲಕ್ಷಣಮ್**

– ರಾಮಾಯಣಮಂಜರೀ

ದೋಷಗಳಲ್ಲಿ ಆಸಕ್ತಿ ಮತ್ತು ಗುಣದಲ್ಲಿ ದ್ವೇಷ ಇದು ಸಂಪತ್ತಿನ ವಿನಾಶದ ಲಕ್ಷಣ.

**ದ್ಯೂತಂ ಸರ್ವಾಪದಾಂ ಮೂಲಮ್**

– ಭಾರತಮಂಜರೀ 2.340

ಎಲ್ಲ ವಿಪತ್ತುಗಳಿಗೆ ಮೂಲವಾಗಿರುವುದು ಜೂಜು.

**ದ್ರೋಹಃ ಸತ್ಯಂ ವಿಪತ್ಫಲಮ್**

– ಬೃಹತ್ಕಥಾಮಂಜರೀ

ದ್ರೋಹ ಬಗೆದರೆ ವಿಪತ್ತು ಉಂಟಾಗುವುದು ನಿಶ್ಚಿತ.

**ಧತ್ತೇ ನಿಷೇಧವಿಷಯೇ ಪರಮಾನುಬಂಧಮ್**

– ಭಾರತಮಂಜರೀ 1.574

ಬೇಡವೆಂಬುದರ ಬಗ್ಗೆ ಅತ್ಯಾಸಕ್ತಿಯು ಉಂಟಾಗುತ್ತದೆ.

**ಧನಂ ಧನಂ ಕದರ್ಯಾಣಾಂ ಧರ್ಮಸ್ತು ಮಹತಾಂ ಧನಮ್**

– ರಾಮಾಯಣಮಂಜರೀ

ಹೀನ ಮನುಜರಿಗೆ ಹಣವೇ ದೊಡ್ಡಧನ ; ಮಹಾತ್ಮರಿಗೆ ಧರ್ಮವೇ ನಿಜವಾದ ಧನ.

**ಧನವಾನ್ ಕೋ ನ ವಂಚಿತಃ ?**

– ಬೃಹತ್ಕಥಾಮಂಜರೀ

ಸ್ಥಿತಿವಂತನಾದ ಯಾರು ತಾನೇ ಮೋಸಕ್ಕೆ ಒಳಗಾಗಿಲ್ಲ?

**ಧನೇನ ವರ್ಧತೇ ತೃಷ್ಣಾ**

– ಭಾರತಮಂಜರೀ 13.998

ಹಣದಿಂದ ದುರಾಸೆಯು ಹೆಚ್ಚುತ್ತದೆ.

**ಧನೇ ಪತತಿ ನ ಸ್ನಿಗ್ಧಾ ದೃಷ್ಟಿರುನ್ನತ ಜನ್ಮನಾಮ್**

**– ರಾಮಾಯಣಮಂಜರೀ**

ಉತ್ತಮ ವಂಶದಲ್ಲಿ ಹುಟ್ಟಿಬಂದವರ ಸ್ನೇಹದೃಷ್ಟಿಯು ಹಣದ ಮೇಲೆ ಬೀಳುವುದಿಲ್ಲ.

**ಧನ್ಯಃ ಪುಣ್ಯವತಾಮೇವ ಪರಾರ್ಥೇ ಜೀವಿತವ್ಯಯಃ**

**– ಬೃಹತ್ಕಥಾಮಂಜರೀ**

ಬೇರೆಯವರ ಸಲುವಾಗಿ ಜೀವನವನ್ನು ಸವೆಸುವ ಪುಣ್ಯವಂತರೇ ಧನ್ಯರು.

**ಧನ್ಯಸ್ಯ ಕಿಂ ದುರ್ಲಭಮ್**

**– ಬೃಹತ್ಕಥಾಮಂಜರೀ**

ಧನ್ಯನಾದವನಿಗೆ ದುರ್ಲಭವಾದದ್ದೇನು?

**ಧರ್ಮಂ ನಾಪೇಕ್ಷತೇ ವಿಧಿಃ**

**– ರಾಮಾಯಣಮಂಜರೀ**

ವಿಧಿಯು ಧರ್ಮವನ್ನು ಅಪೇಕ್ಷೆ ಪಡುವುದಿಲ್ಲ.

**ಧರ್ಮ ಏವ ಪ್ಲವಃ ಪುಂಸಾಂ ಸಂಸಾರಮಕರಾಕರೇ**

**– ಬೃಹತ್ಕಥಾಮಂಜರೀ**

ಸಂಸಾರವೆಂಬ ಮೊಸಳೆಯ ಮನೆಯಲ್ಲಿ ಧರ್ಮವೇ ಮನುಜರನ್ನು ದಾಟಿಸುವ ದೋಣಿ.

**ಧರ್ಮಮರ್ಯಾದಾಂ ಲಂಘಯಂತಿ ನ ಸಾಧವಃ**

**– ಬೃಹತ್ಕಥಾಮಂಜರೀ**

ಸತ್ಪುರುಷರು ಧರ್ಮದ ಮೇರೆಯನ್ನು ಮೀರುವುದಿಲ್ಲ.

**ಧರ್ಮಸ್ಯ ಸುಸೂಕ್ಷ್ಮೋ ಹಿ ಗತಿಕ್ರಮಃ**

**– ಭಾರತಮಂಜರೀ 1.1114**

ಧರ್ಮದ ನಡಾವಳಿಯು ಬಹುಸೂಕ್ಷ್ಮವಾದುದಲ್ಲವೆ !

**ಧರ್ಮಾಧರ್ಮೌ ನ ಜಾನಂತಿ ವ್ಯಸನಸ್ಥಾಸ್ತು ಪಾರ್ಥಿವಾಃ**

**– ಭಾರತಮಂಜರೀ 2.401**

ಕಷ್ಟಕ್ಕೆ ಸಿಲುಕಿದ ರಾಜರು ಧರ್ಮ–ಅಧರ್ಮಗಳನ್ನು ಅರಿಯರು.

**ಧಾತುಃ ಕಿಂ ನಾಮ ದುರ್ಘಟಮ್**

**– ಬೃಹತ್ಕಥಾಮಂಜರೀ**

ವಿಧಿಯು ಏನನ್ನು ತಾನೇ ಸಾಧಿಸದು?

**ಧಿಕ್ ಸ್ತ್ರೀಣಾಂ ಜೀವನಂ ದೃಥಮ್**

**– ರಾಮಾಯಣಮಂಜರೀ**

ಸ್ತ್ರೀಯರ ಮೊಂಡು ಜೀವನಕ್ಕೆ ಧಿಕ್ಕಾರ.

**ಧಿಗುಪಾಯಾನ್ ಅಪಾಯೈಕ ಪರ್ಯಂತಾನ್ ಮೂರ್ಖಕಲ್ಪಿತಾನ್**

**– ಬೃಹತ್ಕಥಾಮಂಜರೀ**

ಬರಿಯ ಅಪಾಯಕ್ಕೆ ಒಯ್ದುಬಿಡುವಂತಹ ಮೂರ್ಖರು ಯೋಜಿಸಿರುವ ಉಪಾಯಗಳಿಗೆ ಧಿಕ್ಕಾರ.

**ಧೀಮತಾಂ ಬುದ್ಧ್ಯಾ ಭವಂತಿ ಅಖಿಲಸಿದ್ಧಯಃ**

**– ಬೃಹತ್ಕಥಾಮಂಜರೀ**

ಧೀಮಂತರ ಬುದ್ಧಿಶಕ್ತಿಯಿಂದ ಸರ್ವಸಿದ್ಧಿಗಳೂ ಉಂಟಾಗುತ್ತವೆ.

**ಧೀಮಾನೇಕಃ ಸಹಾಯೋಽಸ್ತಿ ಬಹೂನಾಮುದಯಶ್ರಿಯೇ**

**– ಬೃಹತ್ಕಥಾಮಂಜರೀ**

ಅನೇಕ ಜನರ ಏಳಿಗೆಯ ಹಿನ್ನೆಲೆಯಲ್ಲಿ ಒಬ್ಬ ಬುದ್ಧಿವಂತನ ಕೈಚಳಕವಿರುತ್ತದೆ.

**ಧೀರೋಽಪಿ ವಿದ್ವಾನಪಿ ವಿಮುಹ್ಯತಿ**

**– ಬೃಹತ್ಕಥಾಮಂಜರೀ**

ಧೀರನೂ, ವಿದ್ಯಾವಂತನೂ ಮೋಹಕ್ಕೆ ಒಳಗಾಗುತ್ತಾನೆ.

**ಧೂರ್ತೋ ನ ವಂಚ್ಯತೇ**

**– ಬೃಹತ್ಕಥಾಮಂಜರೀ**

ಧೂರ್ತನು ಮೋಸಹೋಗುವುದಿಲ್ಲ.

**ಧೈರ್ಯಂ ವಿಪತ್ಪಾರಜಲಧೇಃ ಸೇತುಃ**

**– ಬೃಹತ್ಕಥಾಮಂಜರೀ**

ಧೈರ್ಯವೇ ವಿಪತ್ತೆಂಬ ದೊಡ್ಡ ಸಮುದ್ರಕ್ಕೆ ಸೇತುವೆ.

**ನ ಕಸ್ಯಾನೇಕದೋಷೋಽಪಿ ಪುತ್ರಃ ಕಾಯ ಇವ ಪ್ರಿಯಃ?**

**– ಭಾರತಮಂಜರೀ 3.73**

ಅನೇಕ ದೋಷಗಳುಳ್ಳವನಾಗಿದ್ದರೂ ಮಗನು, ತನ್ನ ಶರೀರವೆಂಬಂತೆ, ಯಾರಿಗೆ ತಾನೇ ಇಷ್ಟವಾಗುವುದಿಲ್ಲ?

**ನ ಕುರ್ಯಾದ್ ಬಲಿನಾ ವೈರಂ ದುರ್ಬಲೋ ದರ್ಪಮಾಶ್ರಿತಃ**

**– ಭಾರತಮಂಜರೀ 13.658**

ದುರ್ಬಲನು ಜಂಭ ಪಟ್ಟುಕೊಂಡು ಬಲಶಾಲಿಯೊಂದಿಗೆ ವೈರವನ್ನು ಇಟ್ಟುಕೊಳ್ಳಬಾರದು.

**ನ ಕುರ್ಯಾನ್ನಿಷ್ಫಲಂ ವೈರಮ್**

**– ಭಾರತಮಂಜರೀ 13.582**

ವ್ಯರ್ಥವಾದ ಶತ್ರುತ್ವವನ್ನು ಮಾಡಬಾರದು.

**ನ ಕ್ಲೀಬಾಃ ಸಂಪದಾಂ ಪದಮ್**

**– ಭಾರತಮಂಜರೀ 13.85**

ನಪುಂಸಕರು ಐಶ್ವರ್ಯಕ್ಕೆ ಅರ್ಹರಲ್ಲ.

**ನ ಜಂಬುಕವಧೇ ಸಿಂಹಃ ಸ್ವಪ್ನೇಽಪಿ ಕುರುತೇ ಮತಿಮ್**

**– ರಾಮಾಯಣಮಂಜರೀ**

ಸಿಂಹವು ಕನಸಿನಲ್ಲಿಯೂ ನರಿಯನ್ನು ಕೊಲ್ಲುವ ಮನಸ್ಸು ಮಾಡುವುದಿಲ್ಲ.

**ನ ಜಾತು ಜಂಬುಕೀಪುತ್ರಃ ಸ್ತನಂ ಪಿಬತಿ ಗೋಃ ಕ್ವಚಿತ್**

– ರಾಮಾಯಣಮಂಜರೀ

ನರಿಯ ಮರಿಯು ಹಸುವಿನ ಕೆಚ್ಚಲ ಹಾಲನ್ನು ಎಂದೂ ಕುಡಿಯುವುದಿಲ್ಲ.

**ನ ತ್ವಾತ್ಮನಿ ಗತೇ ವಿತ್ತಂ ಪುರುಷಾನನುಗಚ್ಛತಿ**

– ರಾಮಾಯಣಮಂಜರೀ

ಮನುಷ್ಯನು ಮೃತಿ ಹೊಂದಿದ ಮೇಲೆ ಹಣವು ಎಂದೂ ಹಿಂಬಾಲಿಸುವುದಿಲ್ಲ.

**ನ ಪುಣ್ಯಂ ಸತ್ಯಮಾತ್ರೇಣ ಸತ್ಯಾನ್ನಾಶೋಽಸ್ತಿ ಕೇವಲಾತ್**

– ಬೃಹತ್ಕಥಾಮಂಜರೀ

ಬರಿಯ ಸತ್ಯದಿಂದ ಪುಣ್ಯವೇನಿಲ್ಲ; ಕೇವಲ ಸತ್ಯದಿಂದ ನಾಶವೇ ಉಂಟಾಗುವುದು.

**ನ ಮಹಾಂತಃ ಸಹಂತೇ ಹಿ ಪ್ರಾಕೃತೈಃ ಸಮಶೀರ್ಷಕಾಮ್**

– ರಾಮಾಯಣಮಂಜರೀ

ದೊಡ್ಡವರು ಅನಾಗರಿಕರ ಜೊತೆ ಸಮಾನವಾದ ಗೌರವವನ್ನು ಸಹಿಸಿಕೊಳ್ಳುವುದಿಲ್ಲ.

**ನರಾಃ ತ್ಯಕ್ತ ಸ್ವಕರ್ಮಾಣೋ ಮೋದಂತೇ ಸಾಧುನಿಂದಯಾ**

– ಬೃಹತ್ಕಥಾಮಂಜರೀ

ತಮ್ಮ ಕೆಲಸಗಳನ್ನು ಮಾಡದಿರುವ ಜನರು ಸತ್ಪುರುಷರನ್ನು ದೂಷಿಸುವುದರಲ್ಲಿ ಸುಖ ಕಾಣುತ್ತಾರೆ.

**ನರ್ಮಹಾಸ ವಿಶಾಲೋ ಹಿ ಗೋಷ್ಠೀಷ್ವಮೃತನಿರ್ಝರಃ**

– ಬೃಹತ್ಕಥಾಮಂಜರೀ

ಗೋಷ್ಠಿಗಳಲ್ಲಿ ಹಾಸ್ಯಶೃಂಗಾರಗಳ ಹೊನಲು ಅಮೃತದ ರಸಬುಗ್ಗೆಯಂತೆ.

**ನವಾಂ ಮಾಲಾಂ ಪರಿತ್ಯಜ್ಯ ನಿರ್ಮಾಲ್ಯೇ ರಮತೇ ನು ಕಃ ?**

– ಬೃಹತ್ಕಥಾಮಂಜರೀ

ಹೊಸ ಹೂಮಾಲೆಯನ್ನು ಬಿಟ್ಟು ಬಳಸಿ ಬಿಸುಟ ಹೂವಿಗೆ ಆಸೆಪಡುವವರುಂಟೇ?

**ನ ವೀರಾಣಾಂ ವಿಷಮಸ್ಥೇಷು ವಿಕ್ರಮಃ**

**– ಭಾರತಮಂಜರೀ 1.904**

ದುಃಸ್ಥಿತಿಯಲ್ಲಿರುವವರ ಮೇಲೆ ವೀರರು ತಮ್ಮ ಪರಾಕ್ರಮವನ್ನು ಮೆರೆಸುವುದಿಲ್ಲ.

**ನ ಶೀಲಕರಣಂ ಜಾತಿಃ ನಾಶ್ರಮಃ ಪುಣ್ಯಕಾರಣಮ್**

**– ಭಾರತಮಂಜರೀ 13.414**

(ಉತ್ತಮ) ಜಾತಿಯು ಉತ್ತಮ ನಡತೆಯನ್ನೇನೂ ಉಂಟುಮಾಡುವುದಿಲ್ಲ; (ಸಂನ್ಯಾಸ) ಆಶ್ರಮವೂ ಪುಣ್ಯಕ್ಕೆ ಕಾರಣವಾಗುವುದಿಲ್ಲ.

**ನಶ್ಯಂತಿ ನ ಹಿ ಪ್ರಾಗ್ಜನ್ಮ ವಾಸನಾಃ**

**– ಬೃಹತ್ಕಥಾಮಂಜರೀ**

ಪೂರ್ವಜನ್ಮದ ವಾಸನಾ ಸಂಸ್ಕಾರವು ನಾಶವಾಗುವುದಿಲ್ಲ.

**ನ ಸಹಂತೇ ಹಿ ಮಾನಿನ್ಯಃ ಪತ್ಯುರನ್ಯಾ ಸಮಾಗಮಮ್**

**– ಬೃಹತ್ಕಥಾಮಂಜರೀ**

ಮಾನಿನಿಯರು ಗಂಡನು ಬೇರೆಯವರ ಸಂಗದಲ್ಲಿರುವುದನ್ನು ಸಹಿಸಿಕೊಳ್ಳುವುದಿಲ್ಲವಷ್ಟೆ!

**ನ ಸಹಂತೇ ಹಿ ರಾಗಿಣ್ಯೋ ಭರ್ತುಃ ಪ್ರೇಮಪದಂ ಜನಮ್**

**– ಬೃಹತ್ಕಥಾಮಂಜರೀ**

ಅನುರಾಗವತಿಯರು ಗಂಡನ ಪ್ರೀತಿಗೆ ಪಾತ್ರರಾದ ಜನರನ್ನು ಸಹಿಸಿಕೊಳ್ಳರು.

**ನ ಸ್ಥಿರಾ ಖಲ ಸಂಗತಿಃ**

**– ಬೃಹತ್ಕಥಾಮಂಜರೀ**

ದುಷ್ಟರ ಗೆಳೆತನವು ಸ್ಥಿರವಲ್ಲ.

**ನ ಹಿ ಕಾತ್ಯಾಯನೀಸಿಂಹಃ ಕ್ರೋಷ್ಟಾರಮಭಿಧಾವತಿ**

**– ಭಾರತಮಂಜರೀ 2.213**

ಪಾರ್ವತಿಯ ಸಿಂಹವು ನರಿಯ ಮೇಲೇರಲು ಓಡುವುದಿಲ್ಲ.

**ನ ಹಿ ಕಾಲಮನಾಸಾದ್ಯ ತಿಮಿರಂ ಹಂತಿ ಭಾಸ್ಕರಃ**

**– ಭಾರತಮಂಜರೀ 3.251**

(ಉದಯ) ಕಾಲವು ಬಾರದೇ ಸೂರ್ಯನು ಕತ್ತಲೆಯನ್ನು ನಾಶಪಡಿಸಲಾರನು.

**ನ ಹಿ ದಾರುಮಯೋ ಹಸ್ತೀ ಕರೋತಿ ಸಮರಕ್ರಿಯಾಮ್**

**– ಬೃಹತ್ಕಥಾಮಂಜರೀ**

ಮರದಿಂದ ಮಾಡಿದ ಆನೆಯು ಯುದ್ಧದಲ್ಲಿ ಸಹಾಯ ಮಾಡಲಾರದಷ್ಟೆ!

**ನ ಹಿ ನಾಮ ಚಲತ್ಯೇಷಾ ವಿಹಿತಾ ಕರ್ಮಸಂತತಿಃ**

**– ರಾಮಾಯಣಮಂಜರೀ**

ಮಾಡಿದ ಕೆಲಸವು ಫಲ ನೀಡದೇ ಹೊರಟು ಹೋಗುವುದಿಲ್ಲ.

**ನ ಹಿ ನಾಮ ನಿಪಾತ್ಯೇಷು ಪತಂತಿ ಪ್ರಭುದೃಷ್ಟಯಃ**

**– ರಾಮಾಯಣಮಂಜರೀ**

ಅಧೋಗತಿಯಲ್ಲಿರಬೇಕಾದವರ ಮೇಲೆ ಪ್ರಭುಗಳ ದೃಷ್ಟಿಯು ಬೀಳುವುದಿಲ್ಲ.

**ನ ಹಿ ನಾಮ ಪ್ರಕಾಶಂತೇ ಪುರಸ್ತೇಜಾಂಸಿ ತೇಜಸಾಮ್**

**– ಭಾರತಮಂಜರೀ 2.259**

ತೇಜಸ್ಸುಗಳ ಎದುರು ತೇಜಸ್ಸುಗಳು ಪ್ರಕಾಶಿಸಲಾರವು.

**ನ ಹಿ ನಿಃಸಾರ ಸಂಸಾರವಿಕಾರಾಃ ಪ್ರಭವಿಷ್ಣವಃ**

**– ಬೃಹತ್ಕಥಾಮಂಜರೀ**

ಪ್ರಭಾವಶಾಲಿಗಳು ಸಾರವಿಲ್ಲದ ಸಂಸಾರದ ವಿಕಾರಕ್ಕೆ ಒಳಗಾಗುವುದಿಲ್ಲ.

**ನ ಹಿ ನಿರ್ವಹಣಂ ಯಾಂತಿ ಪ್ರಭೂಣಾಮಾಶ್ರಿತೇ ರುಷಃ**

**– ಬೃಹತ್ಕಥಾಮಂಜರೀ**

ಪ್ರಭುಗಳ ಕೋಪಗಳು ಆಶ್ರಯ ಪಡೆದಿರುವವರ ಮೇಲೆ ಪ್ರಯೋಗಿಸಲ್ಪಡುವುದಿಲ್ಲ.

**ನ ಹಿ ಪೀತಂ ವಿಷಂ ಪೂರ್ವಂ ಪಶ್ಚಾತ್ತಾಪೇನ ಶಾಮ್ಯತಿ**

**– ಭಾರತಮಂಜರೀ 2.469**

ಮೊದಲಿಗೆ ಕುಡಿದ ವಿಷವು ಆಮೇಲೆ ಪಶ್ಚಾತ್ತಾಪ ಪಡುವುದರಿಂದ ಶಮನಗೊಳ್ಳುವುದಿಲ್ಲ.

**ನಹಿ ಪ್ರಾಣಪರಿತ್ಯಾಗೋ ಮಾನಭಂಗೇ ಪ್ರತಿಕ್ರಿಯಾ**

**– ಭಾರತಮಂಜರೀ 3.1679**

ಅವಮಾನವಾದಾಗ ಪ್ರಾಣ ಬಿಡುವುದು ತಕ್ಕ ಪ್ರತೀಕಾರವಲ್ಲ.

**ನಹಿ ಮಿತ್ರದ್ರುಹಃ ಪಾಪಂ ಶಾಮ್ಯೇತ್ ಜನ್ಮಶತೈರಪಿ**

**– ಬೃಹತ್ಕಥಾಮಂಜರೀ**

ಗೆಳೆಯರಿಗೆ ದ್ರೋಹಗೈದ ಪಾಪವು ನೂರಾರು ಜನ್ಮಗಳಲ್ಲೂ ನೀಗುವುದಿಲ್ಲ.

**ನಹಿ ರತ್ನಪ್ರದೀಪಾನಾಂ ಪ್ರವಿಶತ್ಯಂತರಂ ತಮಃ**

**– ರಾಮಾಯಣಮಂಜರೀ**

ಕತ್ತಲೆಯು ರತ್ನದೀಪಗಳ ಒಳಕ್ಕೆ ಹೋಗಲಾರದು.

**ನಹಿ ಲಾಘವಮಾಪ್ನೋತಿ ಪ್ರಚ್ಛನ್ನೋಽಪಿ ಮಹಾಜನಃ**

**– ಭಾರತಮಂಜರೀ 3.514**

ಮರೆಮಾಚಲು ಯತ್ನಿಸಿದರೂ ದೊಡ್ಡ ಮನುಷ್ಯರು ಚಿಕ್ಕವರಾಗಲಾರರು.

**ನಹಿ ಶೀಲವತಃ ಕಿಂಚಿತ್ ವಿದ್ಯತೇ ಭುವಿ ದುರ್ಲಭಮ್**

**– ಭಾರತಮಂಜರೀ 13.468**

ಶೀಲವಂತನಿಗೆ ಭೂಮಿಯಲ್ಲಿ ಯಾವುದೂ ದುರ್ಲಭವಲ್ಲ.

**ನಹಿ ಶ್ರಿತಾ ಕಲ್ಪತರುಂ ವಲ್ಲೀ ಕಾಚಿದಕಾಂಚನೀ**

**– ಬೃಹತ್ಕಥಾಮಂಜರೀ**

ಕಲ್ಪವೃಕ್ಷದ ಆಶ್ರಯ ಪಡೆದಿರುವುದು ಚಿನ್ನದ ಬಳ್ಳಿಯಲ್ಲದೇ ಬೇರಲ್ಲ.

**ನಹಿ ಸತ್ಪುರುಷೈಃ ಸಂಗಃ ಕ್ವಚಿದ್ಭವತಿ ನಿಷ್ಫಲಃ**

**– ರಾಮಾಯಣಮಂಜರೀ**

ಸತ್ಪುರುಷರ ಸಹವಾಸವೆಂದೂ ನಿಷ್ಫಲವಾಗಿರುವುದಿಲ್ಲ.

**ನಹಿ ಸೌವರ್ಣಶೈಲಾಗ್ರಾತ್ ಕಾಚಖಂಡಃ ಪ್ರಜಾಯತೇ**

**– ಬೃಹತ್ಕಥಾಮಂಜರೀ**

ಚಿನ್ನದ ಬೆಟ್ಟದ ತುದಿಯಿಂದ ಗಾಜಿನ ಚೂರು ಎಂದಿಗೂ ಹುಟ್ಟುವುದಿಲ್ಲ.

**ನ ಹ್ಯನಂತೋ ವಸಂತಃ**

**– ಬೃಹತ್ಕಥಾಮಂಜರೀ**

ವಸಂತ ಋತುವು ಕೊನೆಯಿಲ್ಲದ್ದೇನೂ ಅಲ್ಲ.

**ನ ಹ್ಯನಾಸನ್ನನಾಶಾನಾಂ ಉದೇತಿ ಮಲಿನಾ ಮತಿಃ**

**– ರಾಮಾಯಣಮಂಜರೀ**

ವಿನಾಶವು ಸಮೀಪಿಸದೇ ಇರುವವರ ಬುದ್ಧಿಯು ಕಲುಷಗೊಳ್ಳುವುದಿಲ್ಲ.

**ನ ಹ್ಯಮರ್ಷಪದೇ ಶೋಕಃ ಪ್ರಭವತ್ಯಭಿಮಾನಿನಾಮ್**

**– ರಾಮಾಯಣಮಂಜರೀ**

ಅಭಿಮಾನಿಗಳಿಗೆ ಕೋಪದ ಸ್ಥಾನದಲ್ಲಿ ಶೋಕವೆಂದೂ ಉಂಟಾಗುವುದಿಲ್ಲ.

**ನ ಹ್ಯವಿಜ್ಞಾತವಿಷಯೇ ಪ್ರವರ್ತಂತೇ ಪ್ರತಿಕ್ರಿಯಾಃ**

**– ರಾಮಾಯಣಮಂಜರೀ**

ತಿಳಿಯದಿರುವ ವಿಷಯಕ್ಕೆ ಪ್ರತಿಕ್ರಿಯೆ ಏನಿದ್ದೀತು?

**ನಾಸ್ತಿ ಕಾಯಸಮಂ ಕಿಂಚಿದ್ ದೇಹಿನಾಂ ವಲ್ಲಭಂ ವಿಭೋ**

**– ಭಾರತಮಂಜರೀ 13.1695**

ಪ್ರಾಣಿಗಳಿಗೆ ತಮ್ಮ ಶರೀರದಷ್ಟು ಪ್ರಿಯವಾದುದು ಬೇರೇನೂ ಇಲ್ಲ.

**ನಾಸ್ತಿ ಕಿಂಚಿದಗಮ್ಯಂ ವ್ಯವಸಾಯಿನಾಮ್**

**– ರಾಮಾಯಣಮಂಜರೀ**

ಪ್ರಯತ್ನ ಪಡುವವರಿಗೆ ಸಾಧಿಸಲಾಗದ್ದು ಏನೂ ಇಲ್ಲ.

**ನಿಂದ್ಯೇನ ಗುಣಸಂಪತ್ತಿಂ ಪಶ್ಯಂತಿ ಹಿ ವಶೀಕೃತಾಃ**

– ರಾಮಾಯಣಮಂಜರೀ

ವಶಪಡಿಸಿಕೊಳ್ಳಲಾಗಿರುವವರು ನಿಂದ್ಯವಾದುದರಲ್ಲಿಯೂ ಗುಣಸಂಪತ್ತನ್ನು ಕಾಣುವರಷ್ಟೆ!

**ನಿಃಸಾರಾಣಾಂ ಭವಂತ್ಯೇವ ಸತ್ಯಂ ವಾಚಿ ಪ್ರಗಲ್ಭತಾ**

– ರಾಮಾಯಣಮಂಜರೀ

ಸಾರವಿಲ್ಲದವರ ಮಾತಿನಲ್ಲಿಯೂ ನಿಜಕ್ಕೂ ಪ್ರೌಢಿಮೆ ಇರುವುದುಂಟು.

**ನಿಜಧೈರ್ಯದೃಢಃ ಚಿತ್ತೇ ನಿಶ್ಚಯೋ ಹಿ ಮಹಾತ್ಮನಾಮ್**

– ರಾಮಾಯಣಮಂಜರೀ

ಮಹಾತ್ಮರ ನಿಶ್ಚಯವು ಸ್ವಂತ ಮನಸ್ಸಿನಲ್ಲಿ ಧೈರ್ಯದಿಂದ ದೃಢವಾಗಿರುವಂಥದು.

**ನಿಜಶೀಲಂ ಸುಸತ್ತ್ವಾನಾಂ ರಕ್ಷಾ ಹರಿಣಚಕ್ಷುಷಾಮ್**

– ಬೃಹತ್ಕಥಾಮಂಜರೀ

ಜಿಂಕೆ ಕಂಗಳ ಸತ್ತ್ವಶಾಲಿ ಸ್ತ್ರೀಯರಿಗೆ ಅವರ ಸನ್ನಡತೆಯೇ ಶ್ರೀರಕ್ಷೆ.

**ನಿಜಶೀಲೇನ ರಾಜಂತೇ ಯೋಷಿತಃ**

– ಬೃಹತ್ಕಥಾಮಂಜರೀ

ಹೆಂಗಸರು ತಮ್ಮ ನಡವಳಿಕೆಯಿಂದ ಕಂಗೊಳಿಸುತ್ತಾರೆ.

**ನಿಪಾತ್ಯತೇ ಸುಖೇನೈವ ಶತ್ರುಭಿರ್ವ್ಯಸನೀ ಜನಃ**

– ರಾಮಾಯಣಮಂಜರೀ

ದುರಭ್ಯಾಸವುಳ್ಳಾತನನ್ನು ಶತ್ರುಗಳು ಅನಾಯಾಸವಾಗಿ ಬೀಳಿಸುತ್ತಾರೆ.

**ನಿಗೃಹೀತಂ ನ ವಾ ಕಸ್ಯ ಲೋಭಾತ್ ಪ್ರಾಪ್ತಂ ವಿನಶ್ಯತಿ**

– ಬೃಹತ್ಕಥಾಮಂಜರೀ

ಹಿಡಿದುಕೊಂಡದ್ದು ದುರಾಸೆಯಿಂದ ಯಾರಿಗಾದರೂ ಕಳೆದು ಹೋಗದಿರುವುದೇ?

**ನಿರ್ಲಜ್ಜಸ್ಯ ಭಯಂ ಕುತಃ ?**

– ರಾಮಾಯಣಮಂಜರೀ

ನಾಚಿಕೆಯಿಲ್ಲದವನಿಗೆ ಏತರ ಭಯ ?

**ನಿರ್ವೈರಾ ನ ಪದಂ ಶ್ರಿಯಃ**

– ಭಾರತಮಂಜರೀ 1.72

ಶತ್ರುಗಳಿಲ್ಲದವರು ಅಧಿಕಾರಕ್ಕೆ ಯೋಗ್ಯರಲ್ಲ.

**ನಿರ್ವೈರೋ ನಿರ್ಮಮಃ ಶಾಂತಃ ಪ್ರಯಾತಿ ಪರಮಂ ಪದಮ್**

– ಭಾರತಮಂಜರೀ 1.370

ದ್ವೇಷವಿಲ್ಲದ, ಸ್ವಾರ್ಥವಿಲ್ಲದ ಮತ್ತು ಶಾಂತ ಸ್ವಭಾವವುಳ್ಳಾತನು ಪರಮಪದವನ್ನೈದುವನು.

**ನಿಷ್ಕಲಂಕಾಃ ಕ್ವ ವಾ ಗುಣಾಃ ?**

– ಬೃಹತ್ಕಥಾಮಂಜರೀ

ಕಳಂಕರಹಿತವಾದ ಗುಣಗಳೆಲ್ಲಿವೆ ?

**ನೀಚೋತ್ಕರ್ಷ ಕಥಾದುಃಖಂ ಸಹತೇ ನೋನ್ನತಂ ಮನಃ**

– ರಾಮಾಯಣಮಂಜರೀ

ವಿಕಸಿತವಾದ ಮನಸ್ಸು ನೀಚರೂ ಏಳಿಗೆ ಹೊಂದುತ್ತಿರುವ ಕಥೆಯನ್ನು ಕೇಳುವ ದುಃಖವನ್ನು ಸಹಿಸದು.

**ನೂನಂ ವಿಪದಿ ನೀಚಾನಾಂ ನೃಪಾಣಾಂ ಧರ್ಮವೃತ್ತಯಃ**

– ಭಾರತಮಂಜರೀ 8.208

ನೀಚರಾದ ರಾಜರ ಧರ್ಮಾಚರಣೆಗಳು ವಿಪತ್ತಿಗೆ ಸಿಲುಕಿರುವಾಗ ಮಾತ್ರ.

**ನೃತ್ಯಂ ಹಿ ಲಲಿತಂ ವಸ್ತು ಯೋಷಿತಾಮೇವ ಶೋಭತೇ**

– ಬೃಹತ್ಕಥಾಮಂಜರೀ

ನೃತ್ಯವು ಕೋಮಲವಾದ ಕಲೆ; ಇದು ಹೆಂಗಸರಿಗೇ ಶೋಭಿಸುವಂಥದು.

**ನೇಹ ಪುತ್ರಾತ್ ಪ್ರಿಯತರಂ ಕಿಂಚಿದಸ್ತಿ ಶರೀರಿಣಾಮ್**

**– ಭಾರತಮಂಜರೀ (ಹರಿವಂಶ 1.765)**

ಜನರಿಗೆ ಇಲ್ಲಿ ಮಗನಿಗಿಂತ ಹೆಚ್ಚು ಪ್ರಿಯವಾದುದು ಬೇರೇನೂ ಇಲ್ಲ.

**ಪಂಚಾನನಾನುಕಾರೋ ಹಿ ಮಾರ್ಜಾರಸ್ಯ ನ ಶೋಭತೇ**

**– ಭಾರತಮಂಜರೀ 1.684**

ಸಿಂಹದ ಅನುಕರಣೆ ಮಾಡುವುದು ಬೆಕ್ಕಿಗೆ ಶೋಭಿಸುವುದಿಲ್ಲ.

**ಪತಂತಿ ಷಟ್ಪದಾಸ್ತತ್ರ ಯತ್ರ ಯತ್ರ ಸರೋಜಿನೀ**

**– ಭಾರತಮಂಜರೀ 13.1323**

ಎಲ್ಲೆಲ್ಲಿ ಕಮಲವನವುಂಟೋ ಅಲ್ಲಲ್ಲಿ ದುಂಬಿಗಳು ಎರಗುತ್ತವೆ.

**ಪತಿತ ಪ್ರೇಮಬಂಧಾನಾಂ ಆಶಾಬಂಧೋಽತಿದುಃಸಹಃ**

**– ಬೃಹತ್ಕಥಾಮಂಜರೀ**

ಪ್ರೇಮಾನುರಾಗವನ್ನು ಕಳೆದುಕೊಂಡವರು ಆಶಾವಂತರಾಗಿ ಕಾಲ ಕಳೆವುದು ಬಹುಕಷ್ಟ.

**ಪತಿಷ್ಯತಾಂ ಮತಿಃ ಪ್ರಾಯಃ ಕಿಲ್ಬಿಷಾಭಿನಿವೇಶಿನೀ**

**– ರಾಮಾಯಣಮಂಜರೀ**

ಹಾಳಾಗುತ್ತಿರುವವರ ಬುದ್ಧಿಯು ಸಾಮಾನ್ಯವಾಗಿ ಕೊಳಕಿನಲ್ಲಿ ಆಸಕ್ತಿ ತಳೆದಿರುತ್ತದೆ.

**ಪತ್ಯುರ್ದಾರಿದ್ರ್ಯಸಾಹಾಯ್ಯಂ ಸತೀನಾಮೇವ ಶೋಭತೇ**

**– ಬೃಹತ್ಕಥಾಮಂಜರೀ**

ಪತಿಯು ಬಡತನದಿಂದಿರುವಾಗ ಸಹಾಯ ಮಾಡುವುದು ಸತಿಯರಿಗೇ ಶೋಭೆ ತರುವಂಥದು.

**ಪರಾಕ್ರಮೋ ಹಿ ವೀರಾಣಾಂ ಮಾನಭಂಗೇ ಪ್ರತಿಕ್ರಿಯಾ**

**– ಬೃಹತ್ಕಥಾಮಂಜರೀ**

ಮಾನಹಾನಿಯಾದಾಗ ಪರಾಕ್ರಮ ಮೆರೆಯುವುದೇ ವೀರರು ತೋರುವ ಪ್ರತಿಕ್ರಿಯೆ.

**ಪರಕಾರ್ಯಸುಖಾಃ ಸಂತಃ ಸ್ವಸುಖೇಷು ಪರಾಙ್ಮುಖಾಃ**

**– ರಾಮಾಯಣಮಂಜರೀ**

ಬೇರೆಯವರ ಕೆಲಸದಲ್ಲಿ ಸುಖ ಕಾಣುವ ಸಜ್ಜನರು ಸ್ವಸುಖದ ಬಗ್ಗೆ ಪರಾಙ್ಮುಖರು.

**ಪರಪುತ್ರಸ್ಯ ರಕ್ಷಾರ್ಥಂ ಸ್ವಪುತ್ರಃ ತ್ಯಜ್ಯತೇ ಕಥಮ್ ?**

**– ರಾಮಾಯಣಮಂಜರೀ**

ಬೇರೆಯವರ ಮಗನನ್ನು ಕಾಪಾಡಲು ಸ್ವಂತ ಮಗನನ್ನು ಬಿಟ್ಟು ಕೊಡಲಾದೀತೇ?

**ಪರಮಾ ಪ್ರೀತಿಃ ಪುತ್ರಾತ್ ನಾನ್ಯತ್ರ ದೇಹಿನಾಮ್**

**– ರಾಮಾಯಣಮಂಜರೀ**

ಮನುಜರಿಗೆ ಮಗನಿಗಿಂತ ಮಿಗಿಲಾದ ಅತಿಶಯ ಪ್ರೀತಿ ಬೇರೆಲ್ಲೂ ಇರುವುದಿಲ್ಲ.

**ಪರಾತ್ಮನಿಂದಾ ಶ್ಲಾಘಾಸು ಮೌನಿನೋ ಹಿ ಮನೀಷಿಣಃ**

**– ರಾಮಾಯಣಮಂಜರೀ**

ಪರನಿಂದೆ ಆತ್ಮಪ್ರಶಂಸೆಗಳ ಬಗ್ಗೆ ಪ್ರಾಜ್ಞರು ಮೌನ ವಹಿಸುವವರಾಗಿರುತ್ತಾರೆ.

**ಪರಾಭವೇಽಪಿ ದಾರಾಣಾಮುಪೇಕ್ಷಾಂ ಕ್ಷಮತೇ ನು ಕಃ**

**– ಭಾರತಮಂಜರೀ 2.396**

ಸೋಲಿನಲ್ಲಿಯೂ ಹೆಂಡತಿಯ ತಿರಸ್ಕಾರವನ್ನು ಯಾರು ಸಹಿಸಿಯಾರು?

**ಪರಾಭಿಘಾತಾದಶ್ನಾತಿ ವಿಭೂತಿಂ ವಿಬುಧೋ ಜನಃ**

**– ಬೃಹತ್ಕಥಾಮಂಜರೀ**

ಶತ್ರುಗಳನ್ನು ಸದೆಬಡಿದು ಧೀರರು ಐಶ್ವರ್ಯವನ್ನು ಅನುಭವಿಸುತ್ತಾರೆ.

**ಪರೋಪಕಾರಃ ಸಂಸಾರೇ ನಿಃಸಾರೇ ಪ್ರಾಪ್ಯತೇ ಕುತಃ ?**

**– ಬೃಹತ್ಕಥಾಮಂಜರೀ**

ಸಾರರಹಿತವಾದ ಈ ಪ್ರಪಂಚದಲ್ಲಿ ಪರೋಪಕಾರವು ದೊರೆವುದೆಲ್ಲಿ ?

**ಪರೋಪಘಾತೇ ನಂದಂತಿ ಲುಬ್ಧಾಃ ಕಾಮಫಲೇಪ್ಸವಃ**

– **ಭಾರತಮಂಜರೀ 13.981**

ಕಾಮಫಲವನ್ನು ಬಯಸುವ ದುರಾಶೆಯ ಜನರು ಇತರರು ಪೆಟ್ಟು ತಿಂದಾಗ ಹರ್ಷಿಸುತ್ತಾರೆ.

**ಪರೋಪದೇಶೇಷು ವಿದ್ವಾನ್ ಸರ್ವಾತ್ಮನಾ ಜನಃ**

– **ಬೃಹತ್ಕಥಾಮಂಜರೀ**

ಇತರರಿಗೆ ಉಪದೇಶ ನೀಡುವಲ್ಲಿ ಜನರೆಲ್ಲರೂ ಪರಿಪೂರ್ಣ ಪಂಡಿತರಾಗಿ ಬಿಡುವರು.

**ಪರೋಪದೇಶೇಷ್ವಥವಾ ಸರ್ವೋ ಭವತಿ ಪಂಡಿತಃ**

– **ಭಾರತಮಂಜರೀ 13.812**

ಪರೋಪದೇಶದಲ್ಲಿ ಎಲ್ಲರೂ ವಿದ್ವಾಂಸರೇ ಸರಿ.

**ಪರೋಪದೇಶೇ ಸರ್ವೋ ಹಿ ಸದಾ ಭವತಿ ಪಂಡಿತಃ**

– **ಬೃಹತ್ಕಥಾಮಂಜರೀ**

ಪರೋಪದೇಶ ನೀಡುವಲ್ಲಿ ಯಾವಾಗಲೂ ಎಲ್ಲರೂ ತಿಳಿವಳಿಕಸ್ಥರೇ ಆಗಿರುತ್ತಾರೆ.

**ಪರ್ಯಂತಕಾಲೇ ದೀಪಸ್ಯ ಬಹುಲೀಭವತಿ ದ್ಯುತಿಃ**

– **ಭಾರತಮಂಜರೀ 5.153**

ದೀಪವು ನಂದಿಹೋಗುವ ಮುನ್ನ ಉಜ್ವಲವಾಗಿ ಬೆಳಗುತ್ತದೆ.

**ಪರ್ಯಾಯಭಾವ ಸದೃಶೀ ಪ್ರಾಣಿನಾಂ ಸತತಂ ಗತಿಃ**

– **ಬೃಹತ್ಕಥಾಮಂಜರೀ**

ಪ್ರಾಣಿಗಳ ನಡಿಗೆಯು ಯಾವಾಗಲೂ ಪರ್ಯಾಯಭಾವಕ್ಕೆ ಸದೃಶವಾದುದು.

**ಪಶೂನಾಮಿವ ಮೂರ್ಖಾಣಾಂ ಧೀಹೀನಂ ನು ಬಲಂ ವೃಥಾ**

– **ಬೃಹತ್ಕಥಾಮಂಜರೀ**

ಬುದ್ಧಿಪೂರ್ವಕವಾಗಿಲ್ಲದ ಮೂರ್ಖರ ಶಕ್ತಿಸಾಮರ್ಥ್ಯವು, ಪಶುಗಳದ್ದೆಂಬಂತೆ, ವ್ಯರ್ಥವೇ ಸರಿ.

**ಪಶೂನಾಮಿವ ಯೂಥೋऽಯಂ ಗತಾನುಗತಿಕೋ ಜನಃ**

– ಬೃಹತ್ಕಥಾಮಂಜರೀ

ಹೋದವರನ್ನು ಹಿಂಬಾಲಿಸುವ ಈ ಜನರು ಪ್ರಾಣಿಗಳ ಹಿಂಡು ಇದ್ದಂತೆ.

**ಪಶ್ಚಾತ್ತಾಪಂ ಹಿ ಪುಷ್ಣಾತಿ ಕಾಲಹೀನೋ ಮನೋರಥಃ**

– ಭಾರತಮಂಜರೀ 1.1162

ಅಕಾಲಿಕವಾದ ಆಸೆಯು ಪಶ್ಚಾತ್ತಾಪವನ್ನು ವರ್ಧಿಸುತ್ತದೆ.

**ಪಾಪಂ ಮಾರ್ಷ್ಟಿ ಶುಭಂ ಸೂತೇ ಸತ್ಯಂ ಸಾಧುಸಮಾಗಮಃ**

– ರಾಮಾಯಣಮಂಜರೀ

ಸಜ್ಜನರ ಸಂಪರ್ಕವು ಸತ್ಯವಾಗಿಯೂ ಪಾಪವನ್ನು ನೀಗಿಸುತ್ತದೆ ಮತ್ತು ಮಂಗಳವನ್ನು ಉಂಟುಮಾಡುತ್ತದೆ.

**ಪಾಪೇ ಪಾಪಾನಾಂ ನಿಃಶಂಕಂ ರಮತೇ ಮನಃ**

– ಭಾರತಮಂಜರೀ 13.695

ಪಾಪಿಗಳ ಮನಸ್ಸು ಪಾಪಕೃತ್ಯಗಳಲ್ಲಿ ನಿಃಶಂಕೆಯಿಂದ ಹರ್ಷಿಸುತ್ತದೆ.

**ಪಾಮರನಾರೀಭ್ಯಃ ವಿಧಿಃ ಪುತ್ರಾನ್ ಪ್ರಯಚ್ಛತಿ**

– ಬೃಹತ್ಕಥಾಮಂಜರೀ

ಬಡ ಮಹಿಳೆಯರಿಗೆ ವಿಧಿಯು ಹೆಚ್ಚು ಮಕ್ಕಳನ್ನು ನೀಡುತ್ತದೆ.

**ಪಾರಿಜಾತಲತಾಭೃಂಗೋ ನ ಹಿ ಜಾತೀಷು ಸಾದರಃ**

– ಬೃಹತ್ಕಥಾಮಂಜರೀ

ಪಾರಿಜಾತದ ಬಳ್ಳಿಯ ದುಂಬಿಯು ಮಲ್ಲಿಗೆಯಲ್ಲಿ ಆದರವುಳ್ಳದ್ದಾಗಿರುವುದಿಲ್ಲ.

**ಪಿತುಃ ಸಂತಾರಿಣೀ ಕನ್ಯಾ ಲೋಕೇ ಹ್ಯಸ್ಮಿನ್ ಪರತ್ರ ಚ**

– ಭಾರತಮಂಜರೀ 1.821

ಈ ಲೋಕ ಹಾಗೂ ಪರಲೋಕಗಳಲ್ಲಿ ತಂದೆಯನ್ನು ದಾಟಿಸುವವಳು ಹೆಣ್ಣುಮಗಳೇ.

**ಪುಂಸಾಂ ಸ್ವಕರ್ಮವೈಚಿತ್ರ್ಯಾತ್ ನ ದುಃಖಂ ನ ಸುಖಂ ಸದಾ**

**– ಬೃಹತ್ಕಥಾಮಂಜರೀ**

ಮನುಷ್ಯರಿಗೆ ತಾವೇ ಮಾಡಿದ ಕರ್ಮದ ವೈಚಿತ್ರ್ಯದಿಂದಾಗಿ ಸುಖ–ದುಃಖಗಳು ಸದಾಕಾಲ ಇರುವುದಿಲ್ಲ.

**ಪುಣ್ಯವತಾಂ ದೈವಾತ್ ಸ್ವಯಮಾಯಾಂತಿ ಸಂಪದಃ**

**– ಬೃಹತ್ಕಥಾಮಂಜರೀ**

ಪುಣ್ಯವಂತರಿಗೆ ಅದೃಷ್ಟದಿಂದಾಗಿ ಐಶ್ವರ್ಯಗಳು ತಾವಾಗಿಯೇ ಬರುತ್ತವೆ.

**ಪುತ್ರೈರಶಕ್ಯಂ ಯತ್ ಕರ್ತುಂ ತತ್ ಸುತಾಭಿರವಾಪ್ಯತೇ**

**– ಬೃಹತ್ಕಥಾಮಂಜರೀ**

ಗಂಡು ಮಕ್ಕಳಿಂದ ಸಾಧಿಸಲಾಗದ್ದನ್ನು ಹೆಣ್ಣು ಮಕ್ಕಳು ಸಾಧಿಸುತ್ತಾರೆ.

**ಪುರುಷಾಃ ಕೃತಘ್ನಾಃ ಕ್ರೂರಕಾರಿಣಃ**

**– ಬೃಹತ್ಕಥಾಮಂಜರೀ**

ಗಂಡಸರು ಕ್ರೂರಿಗಳೂ ಮತ್ತು ಕೃತಘ್ನರೇ ಸರಿ.

**ಪುರೋಧಸಾ ಮಂತ್ರವತಾ ಸಂಯುಕ್ತಃ ತ್ರಿಜಗಜ್ಜಯೀ**

**– ಭಾರತಮಂಜರೀ 1.916**

ಮಂತ್ರವನ್ನು ಪ್ರಯೋಗಿಸಬಲ್ಲ ಪುರೋಹಿತನನ್ನುಳ್ಳ ರಾಜನು ಮೂರೂ ಲೋಕಗಳನ್ನು ಗೆಲ್ಲುವನು.

**ಪುರೋಹಿತಂ ವಿನಾ ಶಕ್ತಿಃ ಕ್ಷತ್ರಿಯಾಣಾಂ ಕುತೋಽನ್ಯಥಾ**

**– ಭಾರತಮಂಜರೀ 1.915**

ಪುರೋಹಿತನಿಲ್ಲದಿರೆ ಕ್ಷತ್ರಿಯರಿಗೆ ಬೇರೆ ಬಲವೆಲ್ಲಿಯದು?

**ಪುಷ್ಟಿರ್ಹಿ ಪ್ರಥಮಾ ರತಿಃ**

**– ಬೃಹತ್ಕಥಾಮಂಜರೀ**

ಪುಷ್ಟಿಯು ಆಸಕ್ತಿಯ ಮೊದಲ ವಸ್ತು.

**ಪೂರ್ಣೇಂದುಃ ಅಮೃತೋದ್ಗಾರಿಕಿರಣಃ ಕಸ್ಯ ನ ಪ್ರಿಯಃ**

**– ಬೃಹತ್ಕಥಾಮಂಜರೀ**

ಅಮೃತದ ಕಿರಣಗಳನ್ನು ಹೊರಸೂಸುವ ಪೂರ್ಣಚಂದ್ರನು ಯಾರಿಗೆ ಪ್ರಿಯನಲ್ಲ?

**ಪೂರ್ವಂ ಕಥಯತಿ ಪ್ರಾಯೋ ಮನಃ ಪುಂಸಃ ಶುಭಾಶುಭಮ್**

**– ರಾಮಾಯಣಮಂಜರೀ**

ಮನುಷ್ಯರಿಗೆ ಮನಸ್ಸು ಮೊದಲಿಗೇ ಶುಭ ಅಶುಭಗಳನ್ನು ಸಾಮಾನ್ಯವಾಗಿ ತಿಳಿಸಿಬಿಡುತ್ತದೆ.

**ಪೂರ್ವಸಂಬಂಧಾತ್ ಸಂಗಮೋ ದೇಹಿನಾಮಿಹ**

**– ಬೃಹತ್ಕಥಾಮಂಜರೀ**

ಪೂರ್ವಜನ್ಮದ ಕಾರಣದಿಂದ ಮನುಜರಿಗೆ ಈ ಜನ್ಮದಲ್ಲಿ ಸಹವಾಸಗಳುಂಟಾಗುತ್ತವೆ.

**ಪ್ರಕರ್ಷಶ್ಚೇತ್ ಗುಣೇಷ್ವಸ್ತಿ ಕಿಮಾಕಾರಪರೀಕ್ಷಯಾ ?**

**– ಭಾರತಮಂಜರೀ 1.674**

ಗುಣಗಳ ಬಗ್ಗೆ ಗೌರವವಿದ್ದ ಪಕ್ಷದಲ್ಲಿ ಆಕಾರವನ್ನೇಕೆ ಪರೀಕ್ಷಿಸಬೇಕು?

**ಪ್ರಗಲ್ಭತಾ ಪುರಂಧ್ರೀಣಾಂ ಅಸಾಧ್ಯೇಷ್ವಪಿ ವಸ್ತುಷು**

**– ರಾಮಾಯಣಮಂಜರೀ**

ಸಾಧಿಸಲಾಗದ ವಿಷಯಗಳ ಬಗ್ಗೆಯೂ ಪತಿವ್ರತೆಯರು ಪ್ರೌಢಿಮೆ ಹೊಂದಿರುತ್ತಾರೆ.

**ಪ್ರಗಲ್ಭಾಃ ಕಿಲ ಸರ್ವೇ ಹಿ ಪರದೋಷಾನುದರ್ಶನೇ**

**– ಭಾರತಮಂಜರೀ 1.688**

ಇನ್ನೊಬ್ಬರ ತಪ್ಪನ್ನು ಕಂಡುಹಿಡಿಯುವುದರಲ್ಲಿ ಎಲ್ಲರೂ ನಿಷ್ಣಾತರೇ ಸರಿ.

**ಪ್ರಚ್ಛಾದನಂ ಪ್ರತಾಪಸ್ಯ ನ ಸಹಂತೇ ಹಿ ಮಾನಿನಃ**

**– ರಾಮಾಯಣಮಂಜರೀ**

ಸ್ವಾಭಿಮಾನಿಗಳು ಪರಾಕ್ರಮವನ್ನು ಮರೆಮಾಚುವುದನ್ನು ಸಹಿಸುವುದಿಲ್ಲ.

**ಪ್ರಜ್ಞಾಂ ಋತೇ ಪುಂಸಾಂ ಬಂಧುರನ್ಯೋ ನ ವಿದ್ಯತೇ**

**– ಬೃಹತ್ಕಥಾಮಂಜರೀ**

ಬುದ್ಧಿಯನ್ನು ಬಿಟ್ಟರೆ ಮನುಷ್ಯನಿಗೆ ಬೇರಾವ ಬಂಧುವೂ ಇರುವುದಿಲ್ಲ.

**ಪ್ರಣಯಾದಭ್ಯುಪಗಮೋ ಯಥಾ ನೈವ ತಥಾ ಹಠಾತ್**

**– ಬೃಹತ್ಕಥಾಮಂಜರೀ**

ಪ್ರೀತಿಯಿಂದ ಕಾರ್ಯ ಸಾಧಿಸುವಂತೆ ಹಠದಿಂದ ಆಗುವುದಿಲ್ಲ.

**ಪ್ರತಿಶ್ರುತಂ ಹಿ ಮಹತಾಂ ಪಶ್ಚಾತ್ತಾಪೈರ್ನ ಲುಪ್ಯತೇ**

**– ಬೃಹತ್ಕಥಾಮಂಜರೀ**

ಮಹಾತ್ಮರಿಗೆ ಕೊಟ್ಟ ಮಾತು ಪಶ್ಚಾತ್ತಾಪ ಪಡುವುದರಿಂದ ಲುಪ್ತವಾಗುವುದಿಲ್ಲ.

**ಪ್ರತ್ಯಾಪನ್ನವಿನಾಶಾನಾಂ ಪ್ರಾಕ್ ನಶ್ಯಂತ್ಯಥವಾ ಧಿಯಃ**

**– ರಾಮಾಯಣಮಂಜರೀ**

ವಿನಾಶವು ಸಮೀಪಿಸಿರುವಂಥವರಿಗೆ ಮೊದಲು ಬುದ್ಧಿಯು ನಾಶವಾಗುತ್ತದೆ.

**ಪ್ರತ್ಯುಪಸ್ಥಿತ ನಾಶಾನಾಂ ನಾಶಾಯೈವ ಹಿ ಸಂಗಮಃ**

**– ರಾಮಾಯಣಮಂಜರೀ**

ವಿನಾಶವು ಹತ್ತಿರದಲ್ಲಿರುವವರಿಗೆ ಉಂಟಾಗುವ ಸಂಪರ್ಕಗಳೆಲ್ಲ ವಿನಾಶಕ್ಕೇ ಆಗಿರುತ್ತವೆ.

**ಪ್ರಥಮಂ ಸರ್ವಸಿದ್ಧೀನಾಂ ಸೋಢಾ ವಿಘ್ನಂ ಸುಖೀಭವೇತ್**

**– ಬೃಹತ್ಕಥಾಮಂಜರೀ**

ಎಲ್ಲ ಸಾಧನೆಗಳಿಗೆ ಮೊದಲು ವಿಘ್ನಗಳನ್ನೆಲ್ಲ ಸಹಿಸಿಕೊಳ್ಳುವಾತನು ಸುಖಿಯಾಗುತ್ತಾನೆ.

**ಪ್ರಬಲಃ ಕುಲಜಾಂ ಲಜ್ಜಾಂ ಸಹತೇ ನಹಿ ಮನ್ಮಥಃ**

**– ರಾಮಾಯಣಮಂಜರೀ**

ಬಲಿಷ್ಠನಾದ ಮನ್ಮಥನು ಸತ್ಕುಲಪ್ರಸೂತಳಾದ ಲಜ್ಜೆಯನ್ನು ಸಹಿಸಿಕೊಳ್ಳುವುದಿಲ್ಲ.

**ಪ್ರಭಾವದ್ವೇಷಿಣೋ ನಿತ್ಯಂ ಜ್ಞಾತಯೋ ಗೂಢಶತ್ರವಃ**

**– ರಾಮಾಯಣಮಂಜರೀ**

ಏಳಿಗೆಯನ್ನು ನಿತ್ಯವೂ ದ್ವೇಷಿಸುವ ಸಂಬಂಧಿಕರು ಗೂಢಶತ್ರುಗಳು.

**ಪ್ರಮಾಣಂ ಹಿ ಮನೋವೃತ್ತಿಃ ಸರ್ವಕಾರ್ಯೇಷು ದೇಹಿನಾಮ್**

**– ಭಾರತಮಂಜರೀ 1.1090**

ಮನುಷ್ಯರಿಗೆ ಎಲ್ಲ ಕಾರ್ಯಗಳಲ್ಲಿಯೂ ತಮ್ಮ ಅಂತರಂಗದ ಅಭಿಪ್ರಾಯವೇ ಪ್ರಮಾಣ.

**ಪ್ರಯಾತಿ ನಮ್ರಶಿರಸಾಂ ಸಹಸ್ರಗುಣತಾಂ ಗುಣಃ**

**– ಭಾರತಮಂಜರೀ 3.942**

ವಿನಯಶಾಲಿಗಳ ಗುಣವು ಸಾವಿರಪಟ್ಟು ದೊಡ್ಡದಾಗುತ್ತದೆ.

**ಪ್ರಸಾದಾಲ್ಲಾಲಿತಃ ಪೂರ್ವಂ ನಾವಜ್ಞಾಂ ಸಹತೇ ಜನಃ**

**– ರಾಮಾಯಣಮಂಜರೀ**

ಸಂತಸದಲ್ಲಿದ್ದಾಗ ಮೊದಲಿಗೆ ಮುದ್ದು ಮಾಡಲ್ಪಟ್ಟ ಜನರು ಅನಂತರ ತಿರಸ್ಕಾರವನ್ನು ಸಹಿಸುವುದಿಲ್ಲ.

**ಪ್ರಸಿದ್ಧೋ ಹಿ ಮಹೀನಾಥಃ ಕಾರ್ಯಃ ಸರ್ವಸುಖಾವಹಃ**

**– ಬೃಹತ್ಕಥಾಮಂಜರೀ**

ರಾಜನು ಎಲ್ಲ ಸುಖಕ್ಕೆ ಪಾತ್ರನಾಗಿ ಮಾಡಲ್ಪಡಬೇಕೆಂಬುದು ಪ್ರಸಿದ್ಧವೇ ಇದೆಯಷ್ಟೆ!

**ಪ್ರಾಗ್ದತ್ತಂ ಭುಂಜತೇ ಸರ್ವೇ ಕರ್ತುಂ ವಾ ಕಸ್ಯ ಕಃ ಕ್ಷಮಃ**

**– ಬೃಹತ್ಕಥಾಮಂಜರೀ**

ಹಿಂದೆ ನೀಡಿದ್ದನ್ನೇ ಎಲ್ಲರೂ ಅನುಭವಿಸುತ್ತಾರೆ; ಯಾರಿಗೆ ಯಾರು ಏನು ಮಾಡಲು ಸಾಧ್ಯ?

**ಪ್ರಾಣಾನ್ ಹಿ ಪಣಮಾಧಾಯ ಧನೇ ಧಾವಂತಿ ದಸ್ಯವಃ**

**– ಬೃಹತ್ಕಥಾಮಂಜರೀ**

ಪ್ರಾಣವನ್ನೇ ಪಣವಾಗಿಟ್ಟು ದಸ್ಯುಗಳು ಧನಾರ್ಜನೆಗೆ ಧಾವಿಸುತ್ತಾರಲ್ಲವೆ !

**ಪ್ರಾಣಾಸ್ತೂರ್ಣಂ ಹಿ ನಾರೀಣಾಂ ಪ್ರಿಯಪ್ರಣಯತಾನವೇ**

– ಬೃಹತ್ಕಥಾಮಂಜರೀ

ಪ್ರಿಯತಮರ ಪ್ರೀತಿಯು ಕಡಿಮೆಯಾದಾಗ ನಾರಿಯರ ಪ್ರಾಣವು ಬೇಗನೆ ಹೋಗುವಂಥದಾಗಿರುತ್ತದಷ್ಟೆ!

**ಪ್ರಾಣೈಃ ಪುಣ್ಯವತಾಮೇವ ಪ್ರಣಯಿಪ್ರಾಣಪೂರಣಮ್**

– ಬೃಹತ್ಕಥಾಮಂಜರೀ

ಪುಣ್ಯವಂತರ ಪ್ರಾಣಗಳು ಮಾತ್ರವೇ ಪ್ರಿಯರ ಪ್ರಾಣವನ್ನು ತುಂಬುತ್ತವೆ.

**ಪ್ರಾಪ್ತಾ ಅಪಿ ವಿನಶ್ಯಂತಿ ಸತ್ಯಹೀನಸ್ಯ ಸಂಪದಃ**

– ರಾಮಾಯಣಮಂಜರೀ

ಸುಳ್ಳುಗಾರನ ಸಂಪತ್ತುಗಳು ದೊರೆತಿದ್ದರೂ ನಾಶವಾಗುತ್ತವೆ.

**ಪ್ರಾಪ್ತೇ ವಿಧೌ ನಕ್ಷತ್ರಚಿಂತಯಾ ಕಿಮ್?**

– ಬೃಹತ್ಕಥಾಮಂಜರೀ

ವಿಧಿಯು ಬಂದೇ ಬಿಟ್ಟಿರುವಾಗ ನಕ್ಷತ್ರದ ಚಿಂತೆಯಿಂದೇನು?

**ಪ್ರಾಪ್ನುವಂತಿ ಕಥಂ ನಾಮ ಪರದ್ರೋಹರತಾಃ ಸುಖಮ್**

– ಬೃಹತ್ಕಥಾಮಂಜರೀ

ಬೇರೆಯವರಿಗೆ ದ್ರೋಹ ಬಗೆಯುವಂಥವರಿಗೆ ಸುಖವೆಲ್ಲಿ ದೊರಕೀತು?

**ಪ್ರಾಯಃ ಪರ್ಯಾಯಗಾಮಿನ್ಯಃ ಸಂಪದೋ ವಿಪದಸ್ತಥಾ**

– ರಾಮಾಯಣಮಂಜರೀ

ಕಷ್ಟ–ಸುಖಗಳು ಸಾಮಾನ್ಯವಾಗಿ ಒಂದಾದ ಮೇಲೊಂದು ಬರುತ್ತವೆ.

**ಪ್ರಾಯಃ ಪೂರ್ವಂ ಮನಾಂಸ್ಯೇವ ಕಥಯಂತಿ ಶುಭಾಶುಭಮ್**

– ಭಾರತಮಂಜರೀ 7.224

ಶುಭಾಶುಭಗಳನ್ನು ಸಾಮಾನ್ಯವಾಗಿ ಮನಸ್ಸೇ ಮುಂಚಿತವಾಗಿ ಸೂಚಿಸುತ್ತದೆ.

**ಪ್ರಾಯಃ ಪ್ರಾಗಲ್ಭ್ಯಮಾಯಾಂತಿ ತರುಣ್ಯಃ ಸ್ಥವಿರೇ ವರೇ**

**– ರಾಮಾಯಣಮಂಜರೀ**

ಗಂಡನು ವಯಸ್ಸಾದವನಾಗಿದ್ದರೆ ತರುಣಿಯರು ಸಾಮಾನ್ಯವಾಗಿ ಹೆಚ್ಚು ದಾಷ್ಟಿಕತನ ಹೊಂದಿರುತ್ತಾರೆ.

**ಪ್ರಾಯೇಣ ವ್ಯಸನಾಸಕ್ತಿಃ ಮೋಹಾಯ ಮಹತಾಮಪಿ**

**– ಬೃಹತ್ಕಥಾಮಂಜರೀ**

ದುರಭ್ಯಾಸಗಳು ಸಾಮಾನ್ಯವಾಗಿ ದೊಡ್ಡವರಿಗೂ ಮೋಹವನ್ನು ಉಂಟು ಮಾಡುತ್ತವೆ.

**ಪ್ರಾಯೇಣಾದೀಯತೇ ಮೋಹಃ ಕರ್ಮಣಾ ಮಹತಾಮಪಿ**

**– ರಾಮಾಯಣಮಂಜರೀ**

ದೊಡ್ಡವರಿಗೂ ಸಾಮಾನ್ಯವಾಗಿ ಕರ್ಮದ ಕಾರಣದಿಂದ ಮೋಹವು ಉಂಟಾಗುತ್ತದೆ.

**ಪ್ರಾಯೇಣೋತ್ಸಿಕ್ತಚರಿತಃ ಪ್ರಭೂಣಾಂ ವಲ್ಲಭೋ ಜನಃ**

**– ರಾಮಾಯಣಮಂಜರೀ**

ದುಂಡಾವರ್ತನೆಯುಳ್ಳವರು ಸಾಮಾನ್ಯವಾಗಿ ರಾಜರಿಗೆ ಪ್ರೀತಿಪಾತ್ರರು.

**ಪ್ರಿಯಪಾಣಿಚ್ಯುತಂ ವಾರಿ ವಾಂಛಂತಿ ಪಿತರೋಽಧಿಕಮ್**

**– ರಾಮಾಯಣಮಂಜರೀ**

ಪಿತೃದೇವತೆಗಳು ತಮ್ಮ ಪ್ರೀತಿಪಾತ್ರರು ನೀಡುವ ಜಲಾಂಜಲಿಯನ್ನು ಹೆಚ್ಚಾಗಿ ಬಯಸುತ್ತಾರೆ.

**ಪ್ರಿಯಭ್ರಂಶೋ ಧೀರೈರಪಿ ನ ಸಹ್ಯತೇ**

**– ಬೃಹತ್ಕಥಾಮಂಜರೀ**

ಪ್ರಿಯರಾದವರ ಇಲ್ಲವಾಗುವಿಕೆಯನ್ನು ಧೀರರೂ ಸಹ ಸಹಿಸಿಕೊಳ್ಳಲಾರರು.

**ಪ್ರಿಯಲಾಭಾ ಭವಂತ್ಯೇವ ಸತ್ಸು ಪ್ರಾಣೇಷು ದೇಹಿನಾಮ್**

**– ಬೃಹತ್ಕಥಾಮಂಜರೀ**

ಪ್ರಾಣವೊಂದಿದ್ದರೆ ಮನುಷ್ಯರಿಗೆ ಪ್ರಿಯರ ಸಮಾಗಮವು ಮತ್ತೆ ಉಂಟಾಗಿಯೇ ತೀರುತ್ತದೆ.

**ಪ್ರಿಯಸಮಾಗಮಃ ಸಾರಃ ಸತ್ಯಂ ವಿಭವಸಂಪದಾಮ್**

**– ರಾಮಾಯಣಮಂಜರೀ**

ಸಿರಿಸಂಪತ್ತುಗಳಿಗೆಲ್ಲ ಇಷ್ಟರಾದವರ ಒಡನಾಟವೇ ನಿಜಕ್ಕೂ ತಕ್ಕ ಫಲ.

**ಪ್ರಿಯಾಪ್ರಾಪ್ತಿನಿರಾಶೇನ ಕಿಂ ಶರೀರೇಣ ಲೋಪಿನಾ?**

**– ಬೃಹತ್ಕಥಾಮಂಜರೀ**

ಪ್ರಿಯತಮರು ದೊರಕದೇ ನಿರಾಶವಾಗಿರುವ ಮತ್ತು ವಿನಾಶ ಹೊಂದಲಿರುವ ಶರೀರದಿಂದ ಆಗಬೇಕಾದ್ದೇನು?

**ಪ್ರೀತಿಜಾಲೈಃ ಮನೋಮತ್ಸ್ಯಃ ಕಸ್ಯ ನಾಮ ನ ಕೃಷ್ಯತೇ**

**– ಬೃಹತ್ಕಥಾಮಂಜರೀ**

ಯಾರ ಮನಸ್ಸೆಂಬ ಮೀನು ತಾನೇ ಪ್ರೀತಿಯೆಂಬ ಬಲೆಯಿಂದ ಸೆಳೆಯಲ್ಪಡುವುದಿಲ್ಲ?

**ಪ್ರೀತಿರ್ಹಿ ವಿಶತಿ ಸ್ವಯಮ್**

**– ಬೃಹತ್ಕಥಾಮಂಜರೀ**

ಪ್ರೀತಿಯು ತಾನಾಗಿಯೇ ಪ್ರವೇಶಿಸಿ ಬಿಡುತ್ತದೆ.

**ಪ್ರೇಮ ಪ್ರಣಯಕೋಪಾಂತೇ ಮಾನಿನೀನಾಂ ಹಿ ವರ್ಧತೇ**

**– ಭಾರತಮಂಜರೀ 1.1303**

ಪ್ರಣಯಕೋಪದ ಕೊನೆಯಲ್ಲಿ ಮಾನಿನಿಯರ ಪ್ರೀತಿಯು ಹೆಚ್ಚುವುದಷ್ಟೆ.

**ಪ್ರೇಮಬಂಧೋ ಹಿ ರಮ್ಯತಾ**

**– ಬೃಹತ್ಕಥಾಮಂಜರೀ**

ಪ್ರೀತಿಯ ಫಲವೇ ರಮಣೀಯತೆ.

**ಪ್ರೇಮಾತಿಹರ್ಷ ಸಂಪೂರ್ಣಾ ನಾಭಿನಂದಂತಿ ಭೋಜನಮ್**

**– ಬೃಹತ್ಕಥಾಮಂಜರೀ**

ಪ್ರೇಮಾತಿರೇಕದಿಂದ ತುಂಬಿ ಹೋದವರಿಗೆ ಊಟವು ಹಿಡಿಸುವುದಿಲ್ಲ

**ಪ್ರೌಢಿಂ ವಿದಗ್ಧಮನಸಾಂ ಕಃ ಪರಿಚ್ಛೇತ್ತುಮರ್ಹತಿ ?**

– ಭಾರತಮಂಜರೀ 1.565

ವಿದಗ್ಧರ ಅಂತರಾಳದ ಪ್ರೌಢಿಮೆಯನ್ನು ಅಳೆಯಬಲ್ಲವರಾರು?

**ಬಂಧುಮಿತ್ರವಿಯುಕ್ತಾನಾಂ ಭೂತಯೋ ಹಿ ವಿಡಂಬನಾಃ**

– ಭಾರತಮಂಜರೀ 10.16

ಬಂಧುಮಿತ್ರರಿಂದ ವಿಯೋಗ ಹೊಂದಿರುವವರಿಗೆ ಐಶ್ವರ್ಯವು ವಿಡಂಬನೆಯೇ ಸರಿ.

**ಬಂಧುಸ್ವಜನಹೀನಾ ತು ಲಕ್ಷ್ಮೀಃ ಕಸ್ಯ ಮನಃ ಸ್ಪೃಶೇತ್?**

– ಭಾರತಮಂಜರೀ 10.13

ಬಂಧುಬಾಂಧವರೇ ಇಲ್ಲದಿರುವಾಗ ಐಶ್ವರ್ಯವು ಯಾರ ಮನಸ್ಸನ್ನು ಮುಟ್ಟೀತು?

**ಬಂಧುಹೀನೇಷು ಯಾತಿ ಸ್ನೇಹೋ ಹ್ಯನಲ್ಪತಾಮ್**

– ಬೃಹತ್ಕಥಾಮಂಜರೀ

ಬಂಧುಗಳಿಲ್ಲದವರ ಗೆಳೆತನವು ವೃದ್ಧಿ ಹೊಂದುತ್ತದೆ.

**ಬಲವದ್ಭಿಃ ವಿರೋಧೋ ಹಿ ಹಾಸ್ಯಾಯೈವ ನ ಸಿದ್ಧಯೇ**

– ಬೃಹತ್ಕಥಾಮಂಜರೀ

ಶಕ್ತಿಶಾಲಿಗಳೊಂದಿಗೆ ವಿರೋಧವು ಹಾಸ್ಯಕ್ಕೆ ಕಾರಣವಾಗುವುದೇ ಹೊರತು ಅದರಿಂದ ಕಾರ್ಯಸಿದ್ಧಿಯೇನೂ ಇಲ್ಲ.

**ಬಹೂನಾಂ ಪ್ರಾಣರಕ್ಷಾರ್ಥಂ ಏಕಹಿಂಸಾ ಪ್ರಶಸ್ಯತೇ**

– ಭಾರತಮಂಜರೀ 19.22

ಅನೇಕರ ಪ್ರಾಣಗಳನ್ನು ಕಾಪಾಡುವುದಕ್ಕೋಸ್ಕರ ಒಬ್ಬನಿಗೆ ಹಿಂಸೆಯಾದರೆ ಅದು ಸಹನೀಯ.

**ಬುದ್ಧಿಃ ಸರ್ವಾರ್ಥಸಾಧಿನೀ**

– ಬೃಹತ್ಕಥಾಮಂಜರೀ

ಬುದ್ಧಿಯು ಎಲ್ಲ ಕಾರ್ಯಗಳನ್ನೂ ಸಾಧಿಸುತ್ತದೆ.

**ಭರ್ತುರಭ್ಯುದಯೈಕಾಗ್ರಸಂಕಲ್ಪಾ ಹಿ ಕುಲಾಂಗನಾಃ**

**– ಬೃಹತ್ಕಥಾಮಂಜರೀ**

ಪತಿವ್ರತೆಯರು ಪತಿಯ ಅಭ್ಯುದಯವೊಂದನ್ನೇ ಸದಾ ಮನಸ್ಸಿನಲ್ಲಿ ಇರಿಸಿ ಕೊಂಡಿರುತ್ತಾರೆ.

**ಭವಂತಿ ಕಿತವಾಃ ಸಾಹಸವ್ರತಾಃ**

**– ಬೃಹತ್ಕಥಾಮಂಜರೀ**

ಮೋಸಗಾರರು ದುಡುಕಿನ ಕೆಲಸ ಮಾಡುವವರಾಗಿರುತ್ತಾರೆ.

**ಭವಂತಿ ದ್ಯೂತಕಾರಾ ಪದಂ ಧಿಯಃ**

**– ಬೃಹತ್ಕಥಾಮಂಜರೀ**

ಜೂಜಾಡುವವರು ಬುದ್ಧಿವಂತರೇ ಆಗಿರುತ್ತಾರೆ.

**ಭವಂತಿ ಮಹತಾಮೇವ ಸಂಪದೋ ವಿಪದಸ್ತಥಾ**

**– ರಾಮಾಯಣಮಂಜರೀ**

ಸಂಪತ್ತು ವಿಪತ್ತುಗಳೆಲ್ಲ ದೊಡ್ಡವರಿಗೇ ಉಂಟಾಗುತ್ತವೆ.

**ಭವಂತಿ ಮಹತಾಮೇವ ದುಃಸಹಾ ದೈವವಿಕ್ರಿಯಾಃ**

**– ಬೃಹತ್ಕಥಾಮಂಜರೀ**

ಸಹಿಸಲಾಗದ ವಿಧಿಯ ವಿಕಾರಗಳೆಲ್ಲ ದೊಡ್ಡವರಿಗೇ ಉಂಟಾಗುತ್ತವೆ.

**ಭವಿತವ್ಯತಯಾ ಸತ್ಯಂ ಮುದ್ರಿತಃ ಸರ್ವದಾ ಜನಃ**

**– ಭಾರತಮಂಜರೀ 2.298**

ಜನರೆಲ್ಲರೂ ಯಾವಾಗಲೂ ನಿಜವಾಗಿಯೂ ಅದೃಷ್ಟದ ಮುದ್ರೆಯಿಂದ ಮುಚ್ಚಲ್ಪಟ್ಟವರಾಗಿರುತ್ತಾರೆ.

**ಭವಿತವ್ಯತಯಾ ಹಂತ ಬುದ್ಧಿಃ ಕಸ್ಯ ನ ಕೃಷ್ಯತೇ**

**– ಭಾರತಮಂಜರೀ 1.722**

ಅದೃಷ್ಟದಿಂದ ಯಾರ ಬುದ್ಧಿಯು ತಾನೇ ಸೆಳೆಯಲ್ಪಟ್ಟಿರುವುದಿಲ್ಲ?

**ಭಾಂತಿ ನಹಿ ನಾಶೇಷು ಬುದ್ಧಯಃ**

– ಭಾರತಮಂಜರೀ 16.13

ವಿನಾಶಕಾಲದಲ್ಲಿ ಬುದ್ಧಿಯು ಚುರುಕಾಗಿರುವುದಿಲ್ಲ.

**ಭಾವದುಷ್ಟಾನಾಂ ವಿನಶ್ಯಂತ್ಯೇವ ಸಿದ್ಧಯಃ**

– ಬೃಹತ್ಕಥಾಮಂಜರೀ

ಕೆಟ್ಟ ಭಾವನೆಯುಳ್ಳವರ ಸಿದ್ಧಿಗಳೆಲ್ಲ ಹಾಳಾಗುತ್ತವೆ.

**ಭಾವಿಷು ಪ್ರತ್ಯಯಃ ಕಥಮ್ ?**

– ಬೃಹತ್ಕಥಾಮಂಜರೀ

ಭವಿಷ್ಯದ ಬಗ್ಗೆ ನಂಬಿಕೆಯಿಟ್ಟುಕೊಳ್ಳುವುದೆಂತು?

**ಭಾವ್ಯಾನುಗಾಃ ಶ್ರಿಯಃ**

– ಭಾರತಮಂಜರೀ 1.1183

ಐಶ್ವರ್ಯವು ಅದೃಷ್ಟವನ್ನು ಅನುಸರಿಸುತ್ತದೆ.

**ಭಿನ್ನಕರ್ಮಾ ಹಿ ಸಂಸೃತಿಃ**

– ಬೃಹತ್ಕಥಾಮಂಜರೀ

ಸಂಸಾರವು ವಿವಿಧ ಕರ್ಮವುಳ್ಳದ್ದು.

**ಭೂಪತೇಃ ವ್ಯಸನಾಸಂಗಃ ಪ್ರಜಾನಾಂ ಕ್ಷಯಲಕ್ಷಣಮ್**

– ರಾಮಾಯಣಮಂಜರೀ

ರಾಜನು ದುಶ್ಚಟದಲ್ಲಿ ಮುಳುಗಿರುವುದು ಪ್ರಜೆಗಳು ಹಾಳಾಗುವುದರ ಸೂಚನೆ.

**ಭೃಂಗಃ ಕಲ್ಪಲತಾಂ ಪ್ರಾಪ್ಯ ವಲ್ಲೀಷು ರಮತೇ ಕಥಮ್**

– ರಾಮಾಯಣಮಂಜರೀ

ಕಲ್ಪವಲ್ಲಿಯನ್ನು ಪಡೆದ ದುಂಬಿಯು ಸಾಧಾರಣ ಬಳ್ಳಿಯನ್ನು ಮೆಚ್ಚುವುದೆಂತು?

**ಭೃಂಗಃ ಕಲ್ಪಲತಾಂ ವೀಕ್ಷ್ಯ ಯೂಥಿಕಾಂ ಕಥಮೀಹತೇ?**

– ಭಾರತಮಂಜರೀ 3.1760

ಕಲ್ಪವಲ್ಲಿಯನ್ನು ಕಂಡ ದುಂಬಿಯು ಮಲ್ಲಿಗೆಯನ್ನು ಬಯಸುವುದುಂಟೇ?

**ಭೇದಮೂಲಂ ಹಿ ಯೋಷಿತಃ**

– ಭಾರತಮಂಜರೀ 1.1206

ಹೆಂಗಸರೇ ಭೇದೋಪಾಯಕ್ಕೆ ಮೂಲ.

**ಭೋಗಾಃ ಕಸ್ಯ ನ ವಲ್ಲಭಾಃ**

– ರಾಮಾಯಣಮಂಜರೀ

ಸುಖೋಪಭೋಗಗಳು ಯಾರಿಗೆ ಇಷ್ಟವಲ್ಲ?

**ಭೋಗೇ ಪರಿಣತಾಂ ಲಕ್ಷ್ಮೀಂ ಕಃ ತ್ಯಕ್ತುಂ ಸ್ವಯಮೀಶ್ವರಃ ?**

– ಭಾರತಮಂಜರೀ 5.271

ಸುಖಾನುಭವದಲ್ಲಿ ಪರ್ಯವಸಾನವಾದ ಸಂಪತ್ತನ್ನು ತಾವಾಗಿಯೇ ಬಿಟ್ಟುಬಿಡಲು ಯಾರು ಸಮರ್ಥರು?

**ಭ್ರಮಂತಿ ಕೂಟೇನ ಧೂರ್ತಾ ವಂಚಯಿತುಂ ಜನಮ್**

– ಬೃಹತ್ಕಥಾಮಂಜರೀ

ಜನರನ್ನು ವಂಚಿಸಲು ಧೂರ್ತರು ಗುಂಪು ಕಟ್ಟಿಕೊಂಡು ಓಡಾಡುತ್ತಿರುತ್ತಾರೆ.

**ಮಂತ್ರಾಹುತಿಂ ಶ್ಮಶಾನಾಗ್ನಿಃ ನಹಿ ನಾಮಾರ್ಹತಿ ಕ್ವಚಿತ್**

– ಭಾರತಮಂಜರೀ 2.188

ಸ್ಮಶಾನದ ಬೆಂಕಿಯು ಮಂತ್ರದ ಆಹುತಿಗೆ ಎಂದೂ ಅರ್ಹವಾಗಿಲ್ಲ.

**ಮಂತ್ರಿಭಿಃ ಪರಿರಕ್ಷ್ಯಂತೇ ಸೋನ್ಮಾದಾ ಹಿ ನರೇಶ್ವರಾಃ**

– ಬೃಹತ್ಕಥಾಮಂಜರೀ

ತಲೆಕೆಟ್ಟ ರಾಜರು ಮಂತ್ರಿಗಳಿಂದ ಕಾಪಾಡಲ್ಪಡುತ್ತಾರೆ.

**ಮಂದಾರಮಾಲಾಮಾಲೋಕ್ಯ ಮಾಲತ್ಯಾಂ ಕೋ ಹಿ ಸಾದರಃ**

– ಬೃಹತ್ಕಥಾಮಂಜರೀ

ಮಂದಾರಮಾಲೆಯನ್ನು ನೋಡಿದ ಯಾರು ತಾನೇ ಮಲ್ಲಿಗೆಯಲ್ಲಿ ಆದರ ಉಳ್ಳವರಾದಾರು?

**ಮತಿಮತಾಮಸ್ತಿ ತಿರಶ್ಚಾಮಪಿ ಕೌಶಲಮ್**

– ಬೃಹತ್ಕಥಾಮಂಜರೀ

ಕೀಳುಮಟ್ಟದವರಲ್ಲೂ ಬುದ್ಧಿವಂತರಲ್ಲಿ ನೈಪುಣ್ಯವಿರುತ್ತದೆ.

**ಮನಃಶುದ್ಧಿಕೃತಂ ಸರ್ವಂ ಪ್ರಮಾಣಂ ಕರ್ಮ ದೇಹಿನಾಮ್**

– ಭಾರತಮಂಜರೀ 13.415

ಶುದ್ಧಮನಸ್ಸಿನಿಂದ ಮಾಡಿದ ಕೆಲಸವೆಲ್ಲವೂ ಮನುಷ್ಯರಿಗೆ ಪ್ರಮಾಣವೇ ಸರಿ.

**ಮನಸಃ ಸ್ವಭಾವೋ ಹಿ ಅಭಿಲಾಷಿತಾ**

– ಬೃಹತ್ಕಥಾಮಂಜರೀ

ಆಸೆ ಪಡುತ್ತಿರುವುದೇ ಮನಸ್ಸಿನ ಸ್ವಭಾವ.

**ಮನೋಭವಭುಜಂಗೋ ಹಿ ಯತ್ಸತ್ಯಂ ಶ್ರುತಿಲೋಚನಃ**

– ಬೃಹತ್ಕಥಾಮಂಜರೀ

ಕಾಮವೆಂಬ ಹಾವಿಗೆ ಕಿವಿಯೇ ಕಣ್ಣೆಂಬುದು ಸತ್ಯ.

**ಮನೋ ವಿಧತ್ತೇ ಕಮಲಾ ನಾನ್ಯತ್ರ ಪುರುಷೋತ್ತಮಾತ್**

– ಬೃಹತ್ಕಥಾಮಂಜರೀ

ಲಕ್ಷ್ಮಿಯು ನಾರಾಯಣನನ್ನು ಬಿಟ್ಟು ಬೇರೆಯವರಲ್ಲಿ ಮನಸ್ಸನ್ನಿಡುವುದಿಲ್ಲ.

**ಮನ್ಮಥಾನಲವಿಪ್ಲವಃ ಮಹತಾಮಪಿ ದುಃಖದಃ**

– ಬೃಹತ್ಕಥಾಮಂಜರೀ

ಕಾಮದ ಕಾವಿನ ದಂಗೆಯು ದೊಡ್ಡವರಿಗೂ ದುಃಖವನ್ನುಂಟು ಮಾಡುವುದು.

**ಮಹತಾಂ ಹಿ ವಿಯೋಗೇಷು ಗಯಾಶ್ರಾದ್ಧೇ ಪ್ರತಿಕ್ರಿಯಾ**

– ಬೃಹತ್ಕಥಾಮಂಜರೀ

ದೊಡ್ಡವರು ಇಲ್ಲವಾದರೆ ಗಯಾಶ್ರಾದ್ಧವೇ ಪ್ರತೀಕಾರ.

**ಮಹತಾಮಪಿ ಚಿತ್ತಾಬ್ಧಿಮಂದರಃ ಸರ್ವಥಾ ಸ್ಮರಃ**

– ರಾಮಾಯಣಮಂಜರೀ

ಮನ್ಮಥನು ನಿಶ್ಚಯವಾಗಿಯೂ ದೊಡ್ಡವರ ಮನಸ್ಸೆಂಬ ಸಾಗರಕ್ಕೂ ಮಂದರವಿದ್ದಂತೆ.

**ಮಹತಾಮಪಿ ದುರ್ಲಂಘ್ಯಾ ವಿಯೋಗವಿಷಮಾ ವಿಪತ್**

– ಭಾರತಮಂಜರೀ 1.978

ವಿಯೋಗದ ದುರವಸ್ಥೆಯುಳ್ಳ ವಿಪತ್ತನ್ನು ಮೀರುವುದು ದೊಡ್ಡವರಿಗೂ ಅಸಾಧ್ಯ.

**ಮಹತಾಮಪಿ ಯತ್ ಸತ್ಯಂ ದುರ್ನಿವಾರೋ ಮನೋಭವಃ**

– ಭಾರತಮಂಜರೀ 1.243

ಮನ್ಮಥನನ್ನು ತಡೆವುದು ದೊಡ್ಡವರಿಗೂ ಕಷ್ಟವೆಂಬುದು ನಿಜ.

**ಮಾನನೀಯಾ ಹಿ ಯೋಷಿತಃ**

– ಭಾರತಮಂಜರೀ 1.997

ಮಹಿಳೆಯರು ಗೌರವಕ್ಕೆ ಯೋಗ್ಯರೇ ಸರಿ.

**ಮಾನಸಂ ದೂಷಯತ್ಯೇವ ಘೋರಂ ಹಿ ಖಲವಾಗ್ವಿಷಮ್**

– ರಾಮಾಯಣಮಂಜರೀ

ದುಷ್ಟರ ಕಠಿಣ ಮಾತೆಂಬ ವಿಷವು ಮನಸ್ಸನ್ನು ಕೆಡಿಸಿಬಿಡುತ್ತದೆ.

**ಮಾನಿನಾಂ ಮರಣಂ ಶ್ರೇಯಃ ಸಮರೇ ನ ಪಲಾಯನಮ್**

– ಭಾರತಮಂಜರೀ 3.1143

ಮಾನವಂತರಿಗೆ ಯುದ್ಧದಲ್ಲಿ ಸಾಯುವುದು ಮೇಲೇ ಹೊರತು ಓಡಿ ಹೋಗುವುದಲ್ಲ.

**ಮಾನಿನೋ ದೀರ್ಘಮಿಚ್ಛಂತಿ ಪ್ರತೀಕಾರಾಯ ಜೀವಿತಮ್**

– ಭಾರತಮಂಜರೀ 3.1679

ಸ್ವಾಭಿಮಾನಿಗಳು ಸೇಡು ತೀರಿಸಿಕೊಳ್ಳಲು ದೀರ್ಘ ಜೀವನವನ್ನು ಬಯಸುತ್ತಾರೆ.

**ಮಾನ್ಯಾ ವಿಮಾನನಾಂ ನೈತೇ ಸಹಂತೇ ಮಾನಿನೋ ನೃಪಾಃ**

– ಭಾರತಮಂಜರೀ 2.181

ಗೌರವಯೋಗ್ಯರಾದ ಈ ಸ್ವಾಭಿಮಾನಿ ರಾಜರು ಅವಮಾನವನ್ನು ಸಹಿಸಿಕೊಳ್ಳರು.

**ಮಾಯಾವತೀನಾಂ ವೈರೇಣ ಯೋಷಿತಾಂ ಕೋ ಹಿ ಮುಚ್ಯತೇ?**

– ಬೃಹತ್ಕಥಾಮಂಜರೀ

ಕಪಟವನ್ನು ಬಲ್ಲ ಮಹಿಳೆಯರ ದ್ವೇಷದಿಂದ ಬಿಡುಗಡೆ ಹೊಂದುವವರು ಯಾರು?

**ಮಾಯಾವಧ್ಯಾ ಹಿ ಮಾಯಿನಃ**

– ಭಾರತಮಂಜರೀ 10.78

ವಂಚಕರನ್ನು ವಂಚನೆಯಿಂದಲೇ ಕೊಲ್ಲಬೇಕು.

**ಮುಗ್ಧಾಃ ಸ್ವಭಾವಾತ್ ಪ್ರಾಯೇಣ ಯೋಷಿತಃ ತರಲಾಶಯಾಃ**

– ರಾಮಾಯಣಮಂಜರೀ

ಸರಳ ಭಾವನೆಯ ಸ್ತ್ರೀಯರು ಸಾಮಾನ್ಯವಾಗಿ ಸಹಜವಾಗಿಯೇ ಮುಗ್ಧರಾಗಿರುತ್ತಾರೆ.

**ಮೂರ್ಖಸಂಗಭರೇಣೇಯಂ ಪೃಥ್ವೀ ಮಿಥ್ಯೈವ ಪೀಡ್ಯತೇ**

– ರಾಮಾಯಣಮಂಜರೀ

ಮೂರ್ಖರ ಸಹವಾಸದ ಹೊರೆಯಿಂದಾಗಿ ಈ ಭೂಮಿಯು ವೃಥಾ ಹಿಂಸಿಸಲ್ಪಡುತ್ತದೆ.

**ಮೂರ್ಖಾಃ ಸಾಧುಮತದ್ವಿಷಃ**

– ಬೃಹತ್ಕಥಾಮಂಜರೀ

ಮೂರ್ಖರು ಸದಭಿಪ್ರಾಯವನ್ನು ದ್ವೇಷಿಸುವವರಾಗಿರುತ್ತಾರೆ.

**ಮೂರ್ಖಾಣಾಂ ದೋಷಾಯ ಪ್ರಭವಿಷ್ಣುತಾ**

– ಭಾರತಮಂಜರೀ 1.602

ಮೂರ್ಖರಿಗೆ ಅಧಿಕಾರವು ಕೆಟ್ಟದ್ದಕ್ಕೇ.

**ಮೂಲಚ್ಛೇದಂ ರಿಪೋಃ ಕುರ್ಯಾತ್ ಅಥವಾ ನ ಪ್ರಕೋಪಯೇತ್**

– ಭಾರತಮಂಜರೀ 13.571

ಶತ್ರುವಿನ ಬೇರನ್ನೂ ಕಿತ್ತುಹಾಕಬೇಕು ಅಥವಾ ಅವನನ್ನು ಕೋಪಗೊಳಿಸಲೇ ಬಾರದು.

**ಮೂಲಚ್ಛೇದೋ ಹಿ ಧರ್ಮಸ್ಯ ಶರೀರೋಪೇಕ್ಷಣಂ ನೃಣಾಮ್**

**– ಭಾರತಮಂಜರೀ 3.1918**

ಮನುಷ್ಯರು ತಮ್ಮ ಶರೀರವನ್ನು ಉಪೇಕ್ಷೆ ಮಾಡುವುದು ಧರ್ಮದ ಬೇರನ್ನು ಕಡಿದಂತೆಯೇ ಸರಿ.

**ಮೃತಃ ಪ್ರಲಾಪಂ ಬಾಷ್ಪಂ ಚ ನ ಶೃಣೋತಿ ನ ಪಶ್ಯತಿ**

**– ಭಾರತಮಂಜರೀ 13.643**

ಸತ್ತವನು ಗೋಳಾಟವನ್ನೂ ಕೇಳುವುದಿಲ್ಲ; ಕಣ್ಣೀರನ್ನೂ ಕಾಣುವುದಿಲ್ಲ.

**ಮೃತ್ಯುಸ್ಥಾನೇऽಪಿ ಮೂರ್ಖಾಣಾಂ ಕರೋತಿ ಮದನಃ ಪದಮ್**

**– ರಾಮಾಯಣಮಂಜರೀ**

ಸಾಯುವ ಸಂದರ್ಭದಲ್ಲಿಯೂ ಮೂರ್ಖರಿಗೆ ಕಾಮವು ಕೆರಳುತ್ತದೆ.

**ಯಥೇಷ್ಟಕಾರಿಣಂ ದೈವಂ ಕೋ ಹಿ ನಾಮಾತಿವರ್ತತೇ?**

**– ಭಾರತಮಂಜರೀ 2.310**

ತನ್ನಿಷ್ಟದಂತೆ ನಡೆವ ವಿಧಿಯನ್ನು ಮೀರಬಲ್ಲವನಾರು?

**ಯಥೋಕ್ತಕಾರಿಣಃ ಪ್ರೀತ್ಯಾ ವ್ಯಸನಾರ್ತೇಷು ಸಾಧವಃ**

**– ರಾಮಾಯಣಮಂಜರೀ**

ಕಷ್ಟಕ್ಕೆ ಸಿಲುಕಿದವರ ವಿಷಯದಲ್ಲಿ ಸಾಧುಗಳು ಪ್ರೀತಿಯಿಂದಲೇ ಮಾತಿನಂತೆ ನಡೆಯುತ್ತಾರೆ.

**ಯಶಃ ಕುಸುಮವಲ್ಲೀನಾಂ ಪರಶುಃ ವ್ಯಸನೋದಯಃ**

**– ಭಾರತಮಂಜರೀ , ಹರಿವಂಶ 1.744**

ದುಃಶ್ಚಟವುಂಟಾಗುವುದು ಕೀರ್ತಿಯೆಂಬ ಹೂಬಳ್ಳಿಗೆ ಕೊಡಲಿಯಿದ್ದಂತೆ.

**ಯಾ ಯಸ್ಯಾಭಿಮತಾ ಲೋಕೇ ಸಾ ತಸ್ಯಾಧಿಕರೂಪಿಣೀ**

**– ಬೃಹತ್ಕಥಾಮಂಜರೀ**

ಯಾರು ಯಾರಿಗೆ ಇಷ್ಟವೋ ಅವಳು ಅವನಿಗೆ ಹೆಚ್ಚು ಸುಂದರಿ.

**ಯೂನೋಃ ಪ್ರಥಮಸಂಗೇऽಪಿ ಲಜ್ಜಾಂ ನ ಸಹತೇ ಸ್ಮರಃ**

**– ಬೃಹತ್ಕಥಾಮಂಜರೀ**

ಯುವಕರ ಮೊದಲ ಸಮಾಗಮದಲ್ಲಿಯೇ ಮನ್ಮಥನು ನಾಚಿಕೆಯನ್ನು ಸಹಿಸುವುದಿಲ್ಲ.

**ಯೂನೋರ್ಹಿ ಸದೃಶೀ ಪ್ರೀತಿಃ ಕಸ್ಯ ನಾನಂದದಾಯಿನೀ**

**– ಬೃಹತ್ಕಥಾಮಂಜರೀ**

ಯುವಕರ ಪರಸ್ಪರ ಒಪ್ಪುವ ಪ್ರೀತಿಯು ಯಾರಿಗೆ ತಾನೇ ಆನಂದ ತರುವುದಿಲ್ಲ?

**ಯೋಷಿತಾಂ ಚ ನದೀನಾಂ ಚ ಪುನರಾಗಮನಂ ಕುತಃ ?**

**– ಬೃಹತ್ಕಥಾಮಂಜರೀ**

ಹೆಂಗಸರೂ ಮತ್ತು ನದಿಗಳೂ ಮತ್ತೆ ಮರಳುವುದೆಂತು?

**ಯೌವನಂ ತರಂಗಜವ ಗತ್ವರಮ್**

**– ಬೃಹತ್ಕಥಾಮಂಜರೀ**

ಯೌವನವು ಅಲೆಯ ವೇಗದಂತೆ ಓಡಿ ಹೋಗುವಂಥದು.

**ರತ್ನಾನಾಂ ಭಾಜನಂ ನೃಪಃ**

**– ರಾಮಾಯಣಮಂಜರೀ**

ರಾಜನು ಶ್ರೇಷ್ಠವಸ್ತುಗಳೆಲ್ಲಕ್ಕೂ ಪಾತ್ರನಾದವನು.

**ರಮ್ಯಂ ಛಿನತ್ತಿ ಸಹಸಾ ಪಾಪಃ ಕಾಲಕುಠಾರಿಕಃ**

**– ಬೃಹತ್ಕಥಾಮಂಜರೀ**

ಪಾಪಿಷ್ಠವಾದ ಕಾಲವೆಂಬ ಕತ್ತಿಯು ರಮ್ಯವಾದುದನ್ನು ಕೂಡಲೇ ಕತ್ತರಿಸುತ್ತದೆ.

**ರಾಕ್ಷಸಾ ಹಿ ಬಹುಚ್ಛಲಾಃ**

**– ರಾಮಾಯಣಮಂಜರೀ**

ರಾಕ್ಷಸರು ಹಲವು ಮೋಸವುಳ್ಳವರು.

**ರಾಗದ್ವೇಷವಿಕಲ್ಪೇಷು ಪ್ರಮಾಣಂ ಸರ್ವಥಾ ಮನಃ**

– ರಾಮಾಯಣಮಂಜರೀ

ರಾಗ ದ್ವೇಷ ವಿಕಲ್ಪಗಳಲ್ಲಿ ನಿಶ್ಚಿತ ಪ್ರಮಾಣವು ಮನಸ್ಸೇ.

**ರಾಗಾನಲೇನ ದಗ್ಧಾನಾಂ ವೈರಾಗ್ಯಂ ಜಾಯತೇ ಕುತಃ ?**

– ಬೃಹತ್ಕಥಾಮಂಜರೀ

ಅನುರಾಗವೆಂಬ ಬೆಂಕಿಯಿಂದ ಬೆಂದವರಿಗೆ ವೈರಾಗ್ಯವು ಹುಟ್ಟುವುದು ಹೇಗೆ ?

**ರಾಗಾಂಧಃ ಕೋ ಹಿ ಪಶ್ಯತಿ ?**

– ಬೃಹತ್ಕಥಾಮಂಜರೀ

ಅನುರಾಗದಿಂದ ಕುರುಡಾದವನು ಹೇಗೆ ನೋಡಿಯಾನು?

**ರಾಗಿಣಾಂ ಕಿಮಕಾರ್ಯಂ ಹಿ ಸ್ತ್ರಿಯಾ ಸಂಹೃತಚೇತಸಾಮ್**

– ಬೃಹತ್ಕಥಾಮಂಜರೀ

ಹೆಂಗಸರಿಗೆ ಮನಸ್ಸು ಕೊಟ್ಟ ಅನುರಾಗಿಯು ಮಾಡದಿರುವುದೇನು?

**ರಾಗೋ ಹಿ ಖಲಾನಾಂ ಕಲಹೋದಯಃ**

– ಬೃಹತ್ಕಥಾಮಂಜರೀ

ಅನುರಾಗವು ದುಷ್ಟರಿಗೆ ಜಗಳಕ್ಕೆ ಕಾರಣ.

**ರಾಜಭಿಃ ಸಖ್ಯಂ ದುಃಖೇನ ರಕ್ಷ್ಯತೇ**

– ಬೃಹತ್ಕಥಾಮಂಜರೀ

ರಾಜರೊಂದಿಗೆ ಗೆಳೆತನವನ್ನು ಕಾಪಾಡಿಕೊಳ್ಳುವುದು ಕಷ್ಟ.

**ರಾಜಭೀತ್ಯಾ ಸುಖೇ ನಿತ್ಯಂ ಧನಿನೋ ಹಿ ಪರಾಙ್ಮುಖಾಃ**

– ಬೃಹತ್ಕಥಾಮಂಜರೀ

ರಾಜರ ಭಯದಿಂದ ಸಿರಿವಂತರು ಸದಾ ಸುಖಕ್ಕೆ ಪರಾಙ್ಮುಖರಾಗಿರುತ್ತಾರೆ.

**ರಾಜರಹಸ್ಯಂ ನಿರ್ದಹೇತ್**

– ಬೃಹತ್ಕಥಾಮಂಜರೀ

ರಾಜರಹಸ್ಯವು (ಜನರನ್ನು) ಸುಟ್ಟುಹಾಕುತ್ತದೆ.

**ರಾಜಶ್ರೀ ರಜನೀಘೂಕಾಃ ಖಲಾಃ**

– ರಾಮಾಯಣಮಂಜರೀ

ದುಷ್ಟರು ರಾಜ್ಯಲಕ್ಷ್ಮಿಯೆಂಬ ರಾತ್ರಿಯ ಗೂಬೆಗಳು.

**ರಾಜಸೇವಾ ಸಮಾಧಿಶ್ಚ ಧೀಮತಾಮಪಿ ದುರ್ಗ್ರಹಃ**

– ಭಾರತಮಂಜರೀ 4.10

ರಾಜಸೇವೆಯೆಂಬ ಸಮಾಧಿಸ್ಥಿತಿಯನ್ನು ಸಾಧಿಸುವುದು ಧೀಮಂತರಿಗೂ ಬಲುಕಷ್ಟ.

**ರಾಜ್ಞಾಂ ವಿನಾಶಾಯ ವ್ಯಸನಂ ಮಹತಾಮಪಿ**

– ಬೃಹತ್ಕಥಾಮಂಜರೀ

ವ್ಯಸನವು (=ದುಃಖ/ದುಶ್ಚಟ) ದೊಡ್ಡ ರಾಜರನ್ನೂ ನಾಶಪಡಿಸುವುದು.

**ರಾಮಾ ನ ಕಸ್ಯ ರತಯೇ ಮದನಾಭಿರಾಮಾ**

– ಬೃಹತ್ಕಥಾಮಂಜರೀ

ಪ್ರೇಮದಿಂದ ಆಕರ್ಷಕಳಾಗಿರುವ ಸುಂದರಿಯು ಯಾರಿಗೆ ಸಂತೋಷ ತಾರಳು?

**ರೂಪಲುಬ್ಧಾ ಹಿ ಯೋಷಿತಃ**

– ಬೃಹತ್ಕಥಾಮಂಜರೀ

ಹೆಂಗಸರು ರೂಪಕ್ಕೆ ಮನ ಸೋಲುವವರಷ್ಟೆ!

**ಲಕ್ಷ್ಮೀಲತಾಕುಠಾರೋ ಹಿ ಗುರುಶಾಪಃ ಸುದುಃಸಹಃ**

– ಬೃಹತ್ಕಥಾಮಂಜರೀ

ಸಂಪತ್ತಿನ ಬಳ್ಳಿಗೆ ಕೊಡಲಿಯಾಗಿರುವ ಗುರುಗಳ ಶಾಪವು ಸಹಿಸಲಸಾಧ್ಯವಾದುದು.

**ಲಜ್ಜಾನಿಕೇತನಂ ಕನ್ಯಾ**

– ಬೃಹತ್ಕಥಾಮಂಜರೀ

ಹೆಣ್ಣುಮಗಳೆಂಬುವಳು ಲಜ್ಜೆಯ ಆವಾಸಸ್ಥಾನ.

**ಲಬ್ಧ್ವಾ ಮಹತ್‌ಪದಂ ಮೂರ್ಖಾ ಸೇವಂತೇ ನಾಶಮಾತ್ಮನಃ**

– ಭಾರತಮಂಜರೀ 5.74

ದೊಡ್ಡ ಸ್ಥಾನವನ್ನು ಪಡೆದ ಮೂರ್ಖರು ತಮ್ಮ ವಿನಾಶವನ್ನು ಆಶ್ರಯಿಸುತ್ತಾರೆ.

**ಲಲಾಟೇ ಪರ್ಪಟೇ ಕೇನ ಲಿಖಿತಂ ಕೋ ನಿವಾರಯೇತ್?**

– ಬೃಹತ್ಕಥಾಮಂಜರೀ

ಹಣೆಯೆಂಬ ಹಲಗೆಯ ಮೇಲೆ ಯಾರು ಬರೆದದ್ದನ್ನು ಯಾರು ನಿವಾರಿಸಬಲ್ಲರು?

**ಲಾಭಃ ಸಮೋ ಹಿ ವೀರಾಣಾಂ ವಿಜಯೋ ನಿಧನಂ ತು ವಾ**

– ಭಾರತಮಂಜರೀ 10.11

ವಿಜಯವೋ ಮರಣವೋ ವೀರರಿಗೆ ಲಾಭವು ಒಂದೇ ತೆರನಾದುದು.

**ಲುಬ್ಧಸ್ಯ ಹಿ ಧನಾಗಮಃ**

– ಭಾರತಮಂಜರೀ 2.19

ಲೋಭಿಗಳಿಗೇ ಹಣವು ಬರುವುದು.

**ಲುಬ್ಧಾನಾಂ ಸತ್ಯಸಂಕೋಚಾತ್ ಸಂಕುಚಂತ್ಯೇವ ಸಂಪದಃ**

– ಭಾರತಮಂಜರೀ 1.999

ಲೋಭಿಗಳಲ್ಲಿ ಸತ್ಯವು ಸಂಕುಚಿತವಾಗುವುದರಿಂದ ಸಂಪತ್ತುಗಳೂ ಸಂಕೋಚಗೊಳ್ಳುವವು.

**ಲುಬ್ಧೋ ನಹಿ ಸ್ವಜನವತ್ಸಲಃ**

– ಬೃಹತ್ಕಥಾಮಂಜರೀ

ಲೋಭಿಗಳಿಗೆ ಸ್ವಜನಪ್ರೀತಿ ಇರುವುದಿಲ್ಲ.

**ಲೋಕಪ್ರತ್ಯಯಸಾರಾ ಹಿ ಮಹತಾಂ ಪ್ರಭವಿಷ್ಣುತಾ**

– ಬೃಹತ್ಕಥಾಮಂಜರೀ

ದೊಡ್ಡವರ ಅಧಿಕಾರವು ಜನರ ವಿಶ್ವಾಸವನ್ನು ಆಧರಿಸಿರುತ್ತದಷ್ಟೆ!

**ಲೋಕಪ್ರತ್ಯಯಸಾರೋ ಹಿ ಸದಾಚಾರ ಪರಿಗ್ರಹಃ**

– ರಾಮಾಯಣಮಂಜರೀ

ಜನರ ನಂಬಿಕೆಗೆ ಕಾರಣವಾಗಿರುವುದೇ ಸದಾಚಾರದ ನಡವಳಿಕೆ.

**ಲೋಕಸ್ಥಿತೌ ಹಿ ರಾಜಾನಃ ಪ್ರಮಾಣಂ ಧರ್ಮಸೇತವಃ**

– ಬೃಹತ್ಕಥಾಮಂಜರೀ

ಸಮಾಜವ್ಯವಸ್ಥೆಗೆ ಧರ್ಮದ ಸೇತುವೆಗಳಾದ ರಾಜರೇ ಪ್ರಮಾಣ.

**ಲೋಕಸ್ಯ ದ್ರವಿಣೈರ್ನಿತ್ಯಂ ತೃಣವತ್ ಪ್ರಾಣವಿಕ್ರಯಃ**

– ಭಾರತಮಂಜರೀ 1.718

ಜನರು ಹಣಕ್ಕೆ ನಿತ್ಯವೂ ತಮ್ಮ ಪ್ರಾಣವನ್ನು ಹುಲ್ಲಿನಂತೆ ಮಾರುತ್ತಾರೆ.

**ಲೋಕೇ ಮುನೀನಾಂ ಹಿ ಗಿರಾ ಸ್ಥಿತಿಃ**

– ಭಾರತಮಂಜರೀ 1.330

ಮುನಿಗಳ ಮಾತಿನಂತೆ ಲೋಕಸ್ಥಿತಿಯು ಉಂಟಾಗುತ್ತದೆ.

**ವಂಚ್ಯಂತೇ ಧೂರ್ತವಚನೈಃ ಪ್ರಭವಃ ಸರಲಾಶಯಾಃ**

– ಬೃಹತ್ಕಥಾಮಂಜರೀ

ಸರಳಸ್ವಭಾವದ ಪ್ರಭುಗಳು ಧೂರ್ತರ ಮಾತುಗಳಿಂದ ಮೋಸ ಹೋಗುತ್ತಾರೆ.

**ವಜ್ರಲೇಪಾದಪಿ ದೃಢೋ ಮಾನಿನೀನಾಂ ಹಿ ನಿಶ್ಚಯಃ**

– ಬೃಹತ್ಕಥಾಮಂಜರೀ

ಮಾನಿನಿಯರ ನಿಶ್ಚಯವು ವಜ್ರಲೇಪಕ್ಕಿಂತಲೂ ದೃಢವಾದುದು.

**ವಣಿಜಾಂ ದ್ರವಿಣಂ ಪ್ರಾಣಃ ಶರೀರಂ ತೃಣಮೇವ ಯತ್**

– ಬೃಹತ್ಕಥಾಮಂಜರೀ

ವ್ಯಾಪಾರಸ್ಥರಿಗೆ ಹಣವೇ ಪ್ರಾಣ ; ಶರೀರವೆಂಬುದು ಹುಲ್ಲಿಗೆ ಸಮ.

**ವಧೋ ನ ಶಸ್ಯತೇ ರಾಜನ್ ಅಪರ್ಯಾಲೋಚಿತಾಗಸಃ**

– ಬೃಹತ್ಕಥಾಮಂಜರೀ

ತಪ್ಪನ್ನು ಸರಿಯಾಗಿ ವಿಚಾರಣೆ ಮಾಡದೇ ಮರಣದಂಡನೆ ವಿಧಿಸುವುದು ತರವಲ್ಲ.

**ವಸ್ತು ಸಾತಿಶಯಂ ಕಸ್ಯ ನ ಮುಷ್ಣಾತಿ ಹಠಾನ್ಮನಃ**

**– ರಾಮಾಯಣಮಂಜರೀ**

ಅತಿಶಯದ ವಸ್ತುವು ಯಾರ ಮನಸ್ಸನ್ನು ತಾನೇ ಹಠಾತ್ತನೇ ಸೆಳೆಯದಿರದು?

**ವಹ್ನಿಜ್ವಾಲಾ ಜಲೇನೇವ ಶ್ರೀರ್ಮದೇನೋಪಶಾಮ್ಯತಿ**

**– ಬೃಹತ್ಕಥಾಮಂಜರೀ**

ನೀರಿನಿಂದ ಬೆಂಕಿಯ ಜ್ವಾಲೆಯಂತೆ ಕೊಬ್ಬಿನಿಂದ ಸಂಪತ್ತು ನಂದಿಹೋಗುತ್ತದೆ.

**ವಿಕಲೋಽಪಿ ಪುರಃ ಸ್ತ್ರೀಣಾಂ ನೂನಂ ಶಕ್ರಾಯತೇ ಜನಃ**

**– ಭಾರತಮಂಜರೀ 1.1131**

ಅಂಗವಿಕಲರಾದರೂ ಜನರು ಹೆಂಗಸರೆದುರು ಇಂದ್ರನಂತೆ ಆಡುತ್ತಾರೆ ಅಲ್ಲವೇ?

**ವಿಕಾರೇಽಪ್ಯಪರಿತ್ರಾಣಮಾಧುರ್ಯಂ ಹಿ ಸತಾಂ ವಚಃ**

**– ರಾಮಾಯಣಮಂಜರೀ**

ದುರವಸ್ಥೆಯಲ್ಲಿದ್ದರೂ ಸಜ್ಜನರ ಮಾತು ಕಾಪಾಡಿರೆಂದು ಬೇಡದಿರುವ ತೆರದ್ದಾಗಿರುತ್ತದೆ.

**ವಿದ್ಯಯಾ ಸರ್ವಮಾಪ್ಯತೇ**

**– ಬೃಹತ್ಕಥಾಮಂಜರೀ**

ವಿದ್ಯೆಯಿಂದ ಎಲ್ಲವನ್ನೂ ಪಡೆಯಬಹುದು.

**ವಿದ್ಯಾ ಹ್ಯಕೃತ್ರಿಮೋ ದೀಪಃ ಸಂಮೋಹಮಿತರೇ ನೃಣಾಮ್**

**– ಬೃಹತ್ಕಥಾಮಂಜರೀ**

ಮನುಷ್ಯರಿಗೆ ವಿದ್ಯೆಯು ಕೃತಕವಲ್ಲದ ದೀಪ ; ಉಳಿದದ್ದೆಲ್ಲ ಕೇವಲ ಭ್ರಾಂತಿ.

**ವಿಧಾತೃವಿಹಿತಂ ಕೋ ಹಿ ಕದಾ ಲಂಘಯಿತುಂ ಕ್ಷಮಃ ?**

**– ಬೃಹತ್ಕಥಾಮಂಜರೀ**

ವಿಧಿವಿಹಿತವಾದದ್ದನ್ನು ಯಾರು ಯಾವಾಗ ಮೀರಬಲ್ಲರು?

**ವಿಧಾತೃವಿಹಿತಂ ನಾಮ ಕೋಽತಿವರ್ತಿತುಮೀಶ್ವರಃ ?**

– ಭಾರತಮಂಜರೀ 5.174

ಅದೃಷ್ಟವು ತೀರ್ಮಾನಿಸಿರುವುದನ್ನು ಮೀರಲು ಯಾರು ಸಮರ್ಥರು?

**ವಿಧೇರಾಜ್ಞಾಂ ಕೋ ಹಿ ನಾಮಾತಿವರ್ತತೇ?**

– ಬೃಹತ್ಕಥಾಮಂಜರೀ

ವಿಧಿಯ ಆಣತಿಯನ್ನು ಮೀರುವವನಾರು?

**ವಿಧೌ ವಾಮೇ ಪೌರುಷಂ ಹಿ ಕದರ್ಥಿತಾ**

– ಬೃಹತ್ಕಥಾಮಂಜರೀ

ವಿಧಿಯು ವಿರುದ್ಧವಾಗಿರುವಾಗ ಪೌರುಷವು ವ್ಯರ್ಥ.

**ವಿಧೌ ಹಿ ವಾಮತಾಂ ಯಾತೇ ಸರ್ವಮೇತಿ ವಿಪರ್ಯಯಮ್**

– ಬೃಹತ್ಕಥಾಮಂಜರೀ

ವಿಧಿಯು ವಿರುದ್ಧವಾಗಿರುವಾಗ ಎಲ್ಲವೂ ವಿರುದ್ಧವೇ ಆಗುತ್ತದೆ.

**ವಿನಯಃ ಕಸ್ಯ ನ ಪ್ರಿಯಃ ?**

– ರಾಮಾಯಣಮಂಜರೀ

ವಿನಯವು ಯಾರಿಗೆ ಇಷ್ಟವಲ್ಲ?

**ವಿನಯಾವಧಯಃ ಕೋಪಾಃ ಸ್ಥಾಯಿನೋ ನ ಮಹಾತ್ಮನಾಮ್**

– ಭಾರತಮಂಜರೀ 1.1141

ವಿನಯ ತೋರಿಸುವವರೆಗೆ ಮಾತ್ರ ಇರುವ ಮಹಾತ್ಮರ ಕೋಪವು ಶಾಶ್ವತವಾದುದಲ್ಲ.

**ವಿನಶ್ವರಸ್ಯಾಸ್ಯ ಕಿಂ ಶರೀರಸ್ಯ ಶೋಚ್ಯತೇ?**

– ಬೃಹತ್ಕಥಾಮಂಜರೀ

ನಶ್ವರವಾದ ಈ ಶರೀರಕ್ಕಾಗಿ ಶೋಕ ಪಡುವುದೇಕೆ ?

**ವಿನಾ ಶೀಲಂ ರಕ್ಷ್ಯಂತೇ ಕೇನ ಯೋಷಿತಃ ?**

– ಬೃಹತ್ಕಥಾಮಂಜರೀ

ನಡತೆಯನ್ನು ಬಿಟ್ಟು ಹೆಂಗಸರನ್ನು ಕಾಪಾಡಬಲ್ಲವರು ಯಾರು?

**ವಿಪದಃ ಚಿರಂ ನ ತಿಷ್ಠಂತಿ**

– ಬೃಹತ್ಕಥಾಮಂಜರೀ

ವಿಪತ್ತುಗಳು ಚಿರಕಾಲ ಇರುವುದಿಲ್ಲ.

**ವಿಪದ್ವಲ್ಲೀ ಕುಠಾರೋ ಹಿ ಸತ್ಸಹಾಯ ಸಮಾಗಮಃ**

– ಬೃಹತ್ಕಥಾಮಂಜರೀ

ಸಜ್ಜನರ ಸಮಾಗಮವು ವಿಪತ್ತೆಂಬ ಬಳ್ಳಿಯನ್ನು ಕತ್ತರಿಸುವ ಕೊಡಲಿಯಂತೆ.

**ವಿಪತ್ಸ್ವೇವ ಹಿ ವರ್ತಂತೇ ವಿಪದೋ ವಿಧಿಶಾಸನಾತ್**

– ಭಾರತಮಂಜರೀ 3.512

ವಿಧಿಯ ಅಪ್ಪಣೆಯಂತೆ ವಿಪತ್ತಿನಲ್ಲಿಯೇ ವಿಪತ್ತುಗಳು ಹೆಚ್ಚಿರುತ್ತವೆ.

**ವಿಪದಃ ಸರ್ವಗಾಮಿನ್ಯೋ ದುರ್ಲಂಘ್ಯಾ ಭವಿತವ್ಯತಾ**

– ರಾಮಾಯಣಮಂಜರೀ

ವಿಪತ್ತುಗಳು ಎಲ್ಲೆಡೆ ಹೋಗುವಂಥವು; ಅದೃಷ್ಟವನ್ನು ಮೀರಲಾಗದು.

**ವಿಪದ್ವಿಸಂಕಟೇ ಕಾಲೇ ಮರಣಂ ಲಭ್ಯತೇ ಕುತಃ ?**

– ಬೃಹತ್ಕಥಾಮಂಜರೀ

ವಿಪತ್ತಿನ ಕಷ್ಟದ ಕಾಲದಲ್ಲಿ ಸಾವು ಎಲ್ಲಿ ದೊರಕೀತು?

**ವಿಭವೇ ಸರ್ವರತ್ನಾನಾಂ ಅಯತ್ನೇನೈವ ಸಂಗಮಃ**

– ರಾಮಾಯಣಮಂಜರೀ

ಐಸಿರಿಯಿದ್ದಾಗ ಪ್ರಯತ್ನಪಡದೆಯೇ ಎಲ್ಲ ರತ್ನಗಳೂ ಬಂದು ಸೇರುತ್ತವೆ.

**ವಿಭೂತಿರಹಿತಂ ಗೇಹಂ ನ ರಾಜತೇ**

– ಬೃಹತ್ಕಥಾಮಂಜರೀ

ಐಶ್ವರ್ಯವಿಲ್ಲದ ಮನೆಯು ಶೋಭಿಸುವುದಿಲ್ಲ.

**ವಿಭ್ರಮಾಭರಣಂ ರೂಪಂ ಲಾವಣ್ಯಾಭರಣಂ ವಪುಃ**

– ಬೃಹತ್ಕಥಾಮಂಜರೀ

ರೂಪಕ್ಕೆ ವಯ್ಯಾರವೇ ಆಭರಣ ; ದೇಹಕ್ಕೆ ಲಾವಣ್ಯವೇ ಆಭರಣ.

**ವಿಮೂಢಹೃದಯಾ ವಂಚ್ಯಂತೇ ಪ್ರಿಯವಾದಿಭಿಃ**

– ಬೃಹತ್ಕಥಾಮಂಜರೀ

ಮುಗ್ಧಮನಸ್ಸಿನವರು ಹಿತವಾಗಿ ಮಾತನಾಡುವವರಿಂದ ವಂಚಿಸಲ್ಪಡುತ್ತಾರೆ.

**ವಿಯೋಗದುಃಖ ಪ್ರಶಮೇ ಪ್ರಸೀದಂತಿ ಮುಖಶ್ರಿಯಃ**

– ಬೃಹತ್ಕಥಾಮಂಜರೀ

ವಿಯೋಗದ ದುಃಖವು ಶಮನಗೊಂಡಾಗ ಮುಖವು ಕಾಂತಿಯಿಂದ ಕಂಗೊಳಿಸುತ್ತದೆ.

**ವಿಯೋಗಸಾರೇ ಸಂಸಾರೇ ಸ್ನೇಹಏವ ವಿಷಾಶನಮ್**

– ರಾಮಾಯಣಮಂಜರೀ

ವಿಯೋಗವೇ ಆಂತರ್ಯದಲ್ಲಿರುವ ಈ ಪ್ರಪಂಚದಲ್ಲಿ ಸ್ನೇಹವೇ ವಿಷದ ಭೋಜನ.

**ವಿಯೋಗಹೃತಚಿತ್ತಾನಾಂ ಉಪದೇಶಃ ಕ್ವ ಭೇಷಜಮ್**

– ರಾಮಾಯಣಮಂಜರೀ

ವಿಯೋಗದಿಂದ ಮನಸ್ಸು ಕಳೆದುಕೊಂಡವರಿಗೆ ಉಪದೇಶವು ಔಷಧ ವಾದುದೆಲ್ಲಿ?

**ವಿರುದ್ಧೋ ಹಿ ಭೋಗ್ಯಭೋಕ್ತ್ರೋಃ ಸಮಾಗಮಃ**

– ಬೃಹತ್ಕಥಾಮಂಜರೀ

ಭೋಗ್ಯವಸ್ತು ಮತ್ತು ಭೋಗಿಸುವವ ಇವರ ಸಮಾಗಮವು ವಿರುದ್ಧವಾದುದು.

**ವಿವಾದಮೂಲೇ ರಕ್ಷಾಂ ಹಿ ಪೂರ್ವಂ ಶಂಸಂತಿ ಮಾನಿನಃ**

– ಭಾರತಮಂಜರೀ 4.266

ವಿವಾದದ ಮೊದಲಿಗೆ ರಕ್ಷಣೆಯನ್ನು ಅಭಿಮಾನಿಗಳು ಪ್ರಶಂಸಿಸುತ್ತಾರೆ.

**ವಿಶ್ರೃಂಖಲಾ ವಿನಶ್ಯಂತಿ ಪತಿತಾಃ ಸ್ಮರಶಾಸನೇ**

– ಬೃಹತ್ಕಥಾಮಂಜರೀ

ಮನ್ಮಥನ ಶಾಸನಕ್ಕೆ ಒಳಪಟ್ಟು ನೀತಿನಿಯಮವಿಲ್ಲದವರು ಪತಿತರಾಗಿ ವಿನಾಶ ಹೊಂದುತ್ತಾರೆ.

**ವಿಶ್ರಂಭ ಸುಭಗೋ ಭೋಗಃ ಸ್ತ್ರೀಭಿಃ ಕಸ್ಯ ನ ವಲ್ಲಭಃ**

– ಬೃಹತ್ಕಥಾಮಂಜರೀ

ನಂಬಿಕೆಯಿಂದ ಸುಮಧುರವಾಗಿರುವ ಸ್ತ್ರೀ ಸುಖವು ಯಾರಿಗೆ ತಾನೇ ಪ್ರಿಯವಲ್ಲ?

**ವಿಶ್ವಾಸಘಾತಕಃ ಚೌರಃ**

– ಬೃಹತ್ಕಥಾಮಂಜರೀ

ನಂಬಿಕೆಗೆ ದ್ರೋಹ ಬಗೆಯುವವನು ಕಳ್ಳನೇ.

**ವಿಶ್ವಾಸೀ ಚಾತಿಶಂಕೀ ಚ ಸರ್ವಥಾ ವಿಪದಾಂ ಪದಮ್**

– ಭಾರತಮಂಜರೀ 13.334

ಅತಿಯಾಗಿ ನಂಬುವವನೂ, ಅತಿಯಾಗಿ ಅನುಮಾನ ಪಡುವವನೂ ವಿಪತ್ತಿಗೆ ಸಿಲುಕುವುದು ನಿಶ್ಚಿತ.

**ವಿಷಮಂ ಹಿ ಸತೀವ್ರತಮ್**

– ಬೃಹತ್ಕಥಾಮಂಜರೀ

ಪಾತಿವ್ರತ್ಯವು ಕಷ್ಟಸಾಧ್ಯವಾದುದು.

**ವಿಷಮಃ ಸ್ತ್ರೀಣಾಂ ಈರ್ಷ್ಯಾವಿಷಕೃತೋ ಜ್ವರಃ**

– ಬೃಹತ್ಕಥಾಮಂಜರೀ

ಹೆಂಗಸರ ಹೊಟ್ಟೆಕಿಚ್ಚೆಂಬ ವಿಷದಿಂದ ಉಂಟಾದ ತಾಪವು ಸಹಿಸಲಸಾಧ್ಯ.

**ವೃದ್ಧಪಾಥೋ ನ ಶೋಕೇನ ಧೀರಾಣಾಂ ಸ್ಪೃಶತೇ ಮನಃ**

– ಬೃಹತ್ಕಥಾಮಂಜರೀ

ಮುದುಕರ ಶೋಕದ ಕಣ್ಣೀರು ಧೀರರ ಮನಸ್ಸನ್ನು ಮುಟ್ಟುವುದಿಲ್ಲ.

**ವೃದ್ಧವಾಕ್ಯಂ ಹಿತಂ ರಾಜ್ಞಾ ಶ್ರೋತವ್ಯಮ್**

– ಬೃಹತ್ಕಥಾಮಂಜರೀ

ರಾಜನು ಹಿರಿಯರ ಹಿತಕರವಾದ ಮಾತನ್ನು ಕೇಳಬೇಕು.

**ವೃದ್ಧಾನಾಂ ಕೋ ದದಾತಿ ಕಪರ್ದಿಕಾಮ್**

– ಬೃಹತ್ಕಥಾಮಂಜರೀ

ಮುದುಕರಿಗೆ ಒಂದು ಕಾಸನ್ನಾದರೂ ಕೊಡುವವರು ಯಾರು?

**ವೇಶ್ಯಾನಾಂ ಚ ನೃಪಾಣಾಂ ಚ ನಾಸ್ತಿ ಸತ್ಯಂ ಪ್ರಿಯೋ ನರಃ**

– ಭಾರತಮಂಜರೀ 4.12

ರಾಜರಿಗೂ ಮತ್ತು ವೇಶ್ಯೆಯರಿಗೂ ಪ್ರೀತಿಪಾತ್ರನಾದವನೆಂಬುವನು ಖಂಡಿತವಾಗಿಯೂ ಇಲ್ಲ.

**ವೈರಂ ನಹಿ ನಾವಮಾಧಮೇ ಸತಾಮ್**

– ಭಾರತಮಂಜರೀ 3.578

ಸಜ್ಜನರ ವೈರವು ಅಧಮರಲ್ಲಿ ಅಲ್ಲ.

**ವೈರಾಗ್ಯಂ ರಕ್ಷಸಾಂ ಕುತಃ ?**

– ರಾಮಾಯಣಮಂಜರೀ

ರಾಕ್ಷಸರಿಗೆ ವೈರಾಗ್ಯವೆಲ್ಲಿಯದು?

**ವ್ಯವಹಾರ ವಿಚಾರೇಷು ಬಾಹ್ಯಾಃ ಪಂಡಿತಬುದ್ಧಯಃ**

– ರಾಮಾಯಣಮಂಜರೀ

ಪಂಡಿತರ ಬುದ್ಧಿಯು ಲೌಕಿಕ ವ್ಯವಹಾರಗಳ ವಿಷಯಗಳಿಗೆ ಹೊರತಾದುದು.

**ವ್ಯಸುರ್ಮುಹೂರ್ತಂ ನಿಧನೋ ನಿರ್ಧನಸ್ತು ಸದಾ ಮೃತಃ**

– ಭಾರತಮಂಜರೀ 13.55

ಪ್ರಾಣವಿಲ್ಲದವನ ಸಾವು ಕ್ಷಣಿಕವಾದದ್ದು ; ಬಡವನು ಸದಾ ಸತ್ತಂತೆಯೇ.

**ವ್ಯಾಧಯೋ ದುರ್ಬಲಸ್ಯೇವ ನಿಧನಾಯ್ಯೆವ ಶತ್ರವಃ**

– ರಾಮಾಯಣಮಂಜರೀ

ದುರ್ಬಲನಿಗೆ ರೋಗಗಳೆಂಬಂತೆ ಶತ್ರುಗಳು ಇರುವುದು ಸಾವಿಗಾಗಿಯೇ.

**ವ್ಯಾಜೇನ ಶತ್ರೂಣಾಂ ಕುರ್ಯಾತ್ ಸಂಪದಿ ವಂಚನಾವ್**

– ಬೃಹತ್ಕಥಾಮಂಜರೀ

ಮೋಸದಿಂದಲೇ ಶತ್ರುಗಳ ಸಂಪತ್ತನ್ನು ವಂಚಿಸಬೇಕು.

**ಶಂಸಂತಿ ತಾಂ ಕ್ಷಮಾಂ ಸಂತೋ ನ ಯಾ ಪರಿಭವಾಸ್ಪದವ್**

– ಭಾರತಮಂಜರೀ 3.204

ತಿರಸ್ಕಾರಕ್ಕೆ ಆಸ್ಪದವೀಯದ ಕ್ಷಮೆಯನ್ನು ಸಜ್ಜನರು ಪ್ರಶಂಸೆ ಮಾಡುತ್ತಾರೆ.

**ಶತ್ರುಃ ಸ್ಕಂಧೇನ ವೋಢವ್ಯಃ ಪ್ರಾಜ್ಞೈಃ ಸಪದಿ ಸರ್ಪವತ್**

– ಬೃಹತ್ಕಥಾಮಂಜರೀ

ಜ್ಞಾಣರು ಶತ್ರುವನ್ನು ಹಾವನ್ನೆಂಬಂತೆ ಕೂಡಲೇ ಹೆಗಲಮೇಲೆ ಹೊರಬೇಕು.

**ಶರಣಂ ನಾಸ್ತಿ ಲೋಕೇಷು ಪರಿತ್ರಾತಾ ನಿಹಂತಿ ಚೇತ್**

– ರಾಮಾಯಣಮಂಜರೀ

ಕಾಪಾಡಬೇಕಾದವರೇ ಕೊಂದರೆ ಲೋಕದಲ್ಲಿ ರಕ್ಷಣೆ ನೀಡುವವರು ಯಾರೂ ಇರುವುದಿಲ್ಲ.

**ಶರೀರಭಾರವಾಹೋ ಹಿ ಜರೀ ಸರ್ವಾಪದಾಂ ಪದವ್**

– ಭಾರತಮಂಜರೀ 1.348

ಶರೀರದ ಭಾರವನ್ನು ಹೊತ್ತಿರುವ ಮುದುಕನು ಎಲ್ಲ ಕಷ್ಟಗಳಿಗೆ ಆಸ್ಪದ.

**ಶರೀರಸಹಜೋ ನೂನಂ ಅನಾದಿಃ ವಾಸನಾಕ್ರಮಃ**

– ಭಾರತಮಂಜರೀ 3.769

ಶರೀರದ ಜೊತೆಗೇ ಹುಟ್ಟಿಬರುವ ವಾಸನಾ ಸಂಸ್ಕಾರವು ಅನಾದಿಯೇ ಸರಿ.

**ಶಾಮ್ಯತಿ ಪ್ರೌಢಶೋಕಾಗ್ನಿಃ ನೋಪದೇಶಾಂಬುಶೀಕರೈಃ**

**– ರಾಮಾಯಣಮಂಜರೀ**

ಅತಿಯಾಗಿ ಬೆಳೆದಿರುವ ಶೋಕವೆಂಬ ಬೆಂಕಿಯು ಉಪದೇಶವೆಂಬ ನೀರಹನಿಗಳಿಂದ ಆರಿಹೋಗದು.

**ಶಾಶ್ವತೀಂ ಕೋ ಹಿ ಸಹಜಾಂ ವೃತ್ತಿಂ ತ್ಯಜತಿ ಲೋಭತಃ ?**

**– ಭಾರತಮಂಜರೀ 3.900**

ಸಹಜವಾದ ಶಾಶ್ವತ ವೃತ್ತಿಯನ್ನು ಯಾರಾದರೂ ಲೋಭದಿಂದ ಬಿಟ್ಟು ಬಿಡುವರೇನು?

**ಶಿಷ್ಯೋ ಗುರುಗೃಹಂ ಯಾತಿ ನಹಿ ಶಿಷ್ಯಗೃಹಂ ಗುರುಃ**

**– ಬೃಹತ್ಕಥಾಮಂಜರೀ**

ಶಿಷ್ಯನು ಗುರುಗಳ ಮನೆಗೆ ಹೋಗುವನೇ ಹೊರತು ಗುರುಗಳೆಂದಿಗೂ ಶಿಷ್ಯನ ಮನೆಗೆ ಹೋಗರು.

**ಶೀಲೇನ ಲಭ್ಯತೇ ಸರ್ವಂ ಯಾಚ್ಞಾ ಲಜ್ಜೈವ ಕೇವಲಮ್**

**– ರಾಮಾಯಣಮಂಜರೀ**

ನಡವಳಿಕೆಯಿಂದಲೇ ಎಲ್ಲವೂ ದೊರಕುತ್ತದೆ ; ಯಾಚನೆಯು ಕೇವಲ ನಾಚಿಕೆಗೇಡು.

**ಶುಚಃ ಪ್ರಿಯವಿಯೋಗೋತ್ಥಾ ದುಃಸಹಾ ಮಹತಾಮಪಿ**

**– ರಾಮಾಯಣಮಂಜರೀ**

ಪ್ರೀತಿಪಾತ್ರರ ವಿಯೋಗದಿಂದ ಉಂಟಾದ ಶೋಕವನ್ನು ಸಹಿಸುವುದು ದೊಡ್ಡವರಿಗೂ ಕಷ್ಟ.

**ಶುಚಿಕಾಮಾ ಹಿ ದೇವತಾಃ**

**– ಭಾರತಮಂಜರೀ 3.1298**

ದೇವತೆಗಳು ನೈರ್ಮಲ್ಯವನ್ನು ಇಷ್ಟಪಡುತ್ತಾರೆ.

**ಶುದ್ಧ್ಯಶುದ್ಧೀ ಹಿ ಚಿತ್ತಸ್ಯ ಜಂತೂನಾಂ ಸುಖದುಷ್ಕೃತೇಃ**

**– ಬೃಹತ್ಕಥಾಮಂಜರೀ**

ಪ್ರಾಣಿಗಳ ಸುಕೃತ–ದುಷ್ಕೃತ್ಯಗಳ ಫಲವಾಗಿ ಮನಸ್ಸಿನಲ್ಲಿ ಶುಚಿ ಅಶುಚಿಗಳುಂಟಾಗುತ್ತವೆ.

**ಶುಭಂ ಶುಭಕೃತಾದೇವ ವಿಪರೀತಾದ್ವಿಪರ್ಯಯಃ**

**– ಬೃಹತ್ಕಥಾಮಂಜರೀ**

ಒಳ್ಳೆಯ ಕೆಲಸದಿಂದ ಒಳಿತು ; ಕೆಟ್ಟ ಕೆಲಸದಿಂದ ಕೆಡುಕು.

**ಶುಭಾಶುಭವಿಚೇಷ್ಟಾಸು ಪ್ರಮಾಣಂ ದೇಹಿನಾಂ ಮನಃ**

**– ರಾಮಾಯಣಮಂಜರೀ**

ಶುಭಾಶುಭ ಕೆಲಸಗಳ ವಿಷಯದಲ್ಲಿ ಮನುಷ್ಯರಿಗೆ ಮನಸ್ಸೇ ಪ್ರಮಾಣ.

**ಶುಷ್ಯತ್ ಸುಖೇಷು ಕಾಲೇಷು ತ್ಯಾಗೋ ಹ್ಯಮೃತ ನಿರ್ಝರಃ**

**– ಭಾರತಮಂಜರೀ 1.595**

ಸುಖವು ಒಣಗಿಹೋಗುತ್ತಿರುವ ಕಾಲದಲ್ಲಿ ತ್ಯಾಗವೆಂಬುದು ಅಮೃತದ ಬುಗ್ಗೆಯಿದ್ದಂತೆ.

**ಶೈಶವೇ ಪಿತುರಾಯತ್ತಾಃ ಪಾರತಂತ್ರ್ಯಃ ಸದಾ ಸ್ತ್ರಿಯಃ**

**– ಭಾರತಮಂಜರೀ 1.935**

ಚಿಕ್ಕಂದಿನಲ್ಲಿ ತಂದೆಯ ಅಧೀನರಾದ ಹೆಂಗಸರು ಯಾವಾಗಲೂ ಇನ್ನೊಬ್ಬರ ರಕ್ಷಣೆಯಲ್ಲಿರುವವರೇ.

**ಶೋಕಪಾವಕದಗ್ಧಾನಾಂ ಶಂಕೇ ವಹ್ನಿರ್ನಿರರ್ಥಕಃ**

**– ಭಾರತಮಂಜರೀ 1.971**

ಶೋಕವೆಂಬ ಬೆಂಕಿಯಲ್ಲಿ ಬೆಂದವರಿಗೆ ಬೇರೆ ಬೆಂಕಿಯು ವ್ಯರ್ಥವೆಂದೇ ಭಾವಿಸುವೆ.

**ಶೋಕೇನ ನಶ್ಯತಿ ಪ್ರಜ್ಞಾ ಪ್ರಜ್ಞಾನಾಶೋ ವಿಪತ್ತಯೇ**

**– ಭಾರತಮಂಜರೀ 13.896**

ಶೋಕದಿಂದ ಪ್ರಜ್ಞೆಯು ನಾಶವಾಗುತ್ತದೆ; ಪ್ರಜ್ಞಾನಾಶದಿಂದ ವಿಪತ್ತು ಉಂಟಾಗುತ್ತದೆ.

**ಶೋಕೇ ಬಂಧುರಿವ ಸ್ನಿಗ್ಧಃ ಕುತೋ ವಾ ಲಭ್ಯತೇ ಬುಧಃ**

**– ಭಾರತಮಂಜರೀ 1.976**

ಶೋಕದಲ್ಲಿದ್ದಾಗ ಪ್ರೀತಿಯ ಬಂಧುವಿನಂತೆ, ಜಾಣನಾದ ಗೆಳೆಯನು ಎಲ್ಲಿ ದೊರೆತಾನು?

**ಶೋಷಿತೇಽಪಿ ಶರೀರೇಽಸ್ಮಿನ್ ಅಭಿಲಾಷೋ ನ ಶುಷ್ಯತಿ**

**– ರಾಮಾಯಣಮಂಜರೀ**

ಈ ಶರೀರವು ಒಣಗಿ ಹೋಗಿದ್ದರೂ ಆಸೆಯು ಮಾತ್ರ ಒಣಗುವುದಿಲ್ಲ.

**ಶ್ರಿಯಃ ಸಾರಂ ಯತ್ಕಾಮೋ ನ ವಿಮನ್ಯತೇ**

**– ಬೃಹತ್ಕಥಾಮಂಜರೀ**

ಆಸೆಯನ್ನು ಸಾಕಾರಗೊಳಿಸುವುದೇ ಸಂಪತ್ತಿನ ಸಾರ.

**ಶ್ರೀಯುತಾಃ ಸತ್ಯಂ ವಿಪರೀತೇಷು ಸಾದರಾಃ**

**– ಬೃಹತ್ಕಥಾಮಂಜರೀ**

ಶ್ರೀಮಂತರು ನಿಜಕ್ಕೂ ವಿರುದ್ಧವಾದುದರಲ್ಲಿ ಆದರವುಳ್ಳವರಾಗಿರುತ್ತಾರೆ.

**ಶ್ರೀರಕ್ಷಣೇ ರಾಜ್ಞಾಂ ಕರ್ಕಶೋ ಹಿ ನಯಕ್ರಮಃ**

**– ರಾಮಾಯಣಮಂಜರೀ**

ಸಂಪತ್ತನ್ನು ಸಂರಕ್ಷಿಸುವಲ್ಲಿ ರಾಜರ ನೀತಿ ನಿರ್ಧಾರಗಳು ಕಠಿಣವಾಗಿರುತ್ತವಲ್ಲವೆ !

**ಶ್ರುತೇನಾಪೀಪ್ಸಿತಂ ವಸ್ತು ಕಸ್ಯ ಧೈರ್ಯಂ ನ ಕರ್ಷತಿ ?**

**– ಬೃಹತ್ಕಥಾಮಂಜರೀ**

ಇಷ್ಟವಾದ ವಸ್ತುವಿನ ಹೆಸರು ಕೇಳಿದ್ದರಿಂದಲೇ ಯಾರ ಧೈರ್ಯವು ಉಡುಗುವುದಿಲ್ಲ?

**ಶ್ರುತೋ ಹ್ಯೇವ ವಿಶತ್ಯಂತಃ ಪ್ರಾಗ್ಜನ್ಮದಯಿತೋ ಜನಃ**

**– ಬೃಹತ್ಕಥಾಮಂಜರೀ**

ಪೂರ್ವಜನ್ಮದ ಪ್ರಿಯತಮರು ಹೆಸರು ಕೇಳಿದ ಮಾತ್ರದಿಂದಲೇ ಅಂತರ್ಯವನ್ನು ಹೊಕ್ಕಿಬಿಡುತ್ತಾರೆ.

**ಸಂಕಲ್ಪ ಕಲ್ಪವಿಟಪೀ ಕಸ್ಯ ನಾಮ ನ ಶಂಕರಃ?**

– ಬೃಹತ್ಕಥಾಮಂಜರೀ

ಪರಶಿವನು ಯಾರಿಗೇ ತಾನೇ ಚಿಂತಿಸಿದ್ದನ್ನು ನೀಡುವ ಕಲ್ಪವೃಕ್ಷವಲ್ಲ?

**ಸಂಗಮೋ ಹಿ ಸುತೋತ್ಪತ್ತಿ ಪರ್ಯಂತೋ ವ್ಯೋಮಚಾರಿಣಾಮ್**

– ಭಾರತಮಂಜರೀ 1.804

ಗಗನಗಾಮಿಗಳ ಸಮಾಗಮವು ಪುತ್ರೋತ್ಪತ್ತಿಯವರೆಗೆ ಮಾತ್ರ.

**ಸಂಜಾತ ಪ್ರತ್ಯಯೋ ರಾಗಃ ಕಸ್ಯ ವಾಚಾ ನಿವರ್ತತೇ?**

– ಬೃಹತ್ಕಥಾಮಂಜರೀ

ನಂಬಿಕೆಯುಂಟಾದ ಅನುರಾಗವು ಯಾರ ಮಾತಿನಿಂದ ಹಿಂತಿರುಗೀತು?

**ಸಂತಃ ಕೃತಾಪರಾಧೇಽಪಿ ಪ್ರಸಾದ ಮಧುರಾಶಯಾಃ**

– ರಾಮಾಯಣಮಂಜರೀ

ಸಜ್ಜನರು ಅಪರಾಧಿಗಳ ವಿಷಯದಲ್ಲಿಯೂ ಪ್ರಸನ್ನತೆಯ ಸಿಹಿಭಾವನೆಯುಳ್ಳವರಾಗಿರುತ್ತಾರೆ.

**ಸಂತೋಽರ್ಥನಾಸು ಮಹತಾಂ ನಿಷೇಧಂ ನಹಿ ಶಿಕ್ಷಿತಾಃ**

– ಬೃಹತ್ಕಥಾಮಂಜರೀ

ಸಜ್ಜನರು ದೊಡ್ಡವರ ಬೇಡುವಿಕೆಯಲ್ಲಿ ನಿಷೇಧವನ್ನೇನೂ ಕಲಿತಿಲ್ಲ.

**ಸಂಯೋಗಾಂತಾ ಭವಂತ್ಯೇವ ವಿಯೋಗಾಃ ಪುಣ್ಯಕರ್ಮಣಾಮ್**

– ಬೃಹತ್ಕಥಾಮಂಜರೀ

ಪುಣ್ಯವಂತರ ವಿಯೋಗಗಳೆಲ್ಲ ಸಂಗಮದಲ್ಲಿಯೇ ಕೊನೆಗೊಳ್ಳುತ್ತವೆ.

**ಸಂಯೋಗಾಶ್ಚ ವಿಯೋಗಾಶ್ಚ ಸ್ಥಾಯಿನೋ ನಹಿ ದೇಹಿನಾಮ್**

– ಬೃಹತ್ಕಥಾಮಂಜರೀ

ಮನುಜರಿಗೆ ಸಂಯೋಗ ವಿಯೋಗಗಳೆರಡೂ ಶಾಶ್ವತವಲ್ಲ.

**ಸಂಶಯಾಯ ವಿಯೋಗೋ ಹಿ ಯೂನೋರ್ಬದ್ಧಾನುರಾಗಯೋಃ**

**– ಬೃಹತ್ಕಥಾಮಂಜರೀ**

ಗಾಢಪ್ರೇಮವುಳ್ಳ ಯುವಕ–ಯುವತಿಯರ ವಿಯೋಗವು (ಪ್ರಾಣ)ಸಂಶಯಕ್ಕೆ ಆಸ್ಪದ.

**ಸಂಸಾರದುಃಖ ಸರಣಿಃ ವೈಕ್ಲವ್ಯೇನ ನ ಲಂಘ್ಯತೇ**

**– ಬೃಹತ್ಕಥಾಮಂಜರೀ**

ಸಂಸಾರದ ದುಃಖದ ಸರಣಿಯನ್ನು ಖಿನ್ನತೆಯಿಂದ ದಾಟಲಾಗುವುದಿಲ್ಲ.

**ಸಂಸಾರೇ ಸಂಸ್ಕೃತಿಃ ಸ್ವಪ್ನೋ ರಾಗಸ್ತೇನಾಪಿ ರಾಗಿಣಾವ್**

**– ಬೃಹತ್ಕಥಾಮಂಜರೀ**

ಪ್ರಪಂಚದಲ್ಲಿ ಸಂಸಾರವು ಕನಸಿನಂತೆ. ಆದರೆ ಅದರಲ್ಲಿಯೂ ರಾಗಿಗಳಿಗೆ ಅನುರಾಗ.

**ಸಜೀವಮೇವ ಮರಣಂ ಮಾನಭಂಗೋ ಹಿ ಮಾನಿನಾವ್**

**– ರಾಮಾಯಣಮಂಜರೀ**

ಮಾನವಂತರಿಗೆ ಮಾನಹಾನಿಯು ಬದುಕಿದ್ದಂತೆಯೇ ಸಾವು.

**ಸತಾಂ ಕಲುಷಿತಂ ಚೇತಃ ಸ್ವಯಮೇವ ಪ್ರಸೀದತಿ**

**– ಬೃಹತ್ಕಥಾಮಂಜರೀ**

ಸಜ್ಜನರ ಕಲುಷಗೊಂಡಿದ್ದ ಮನಸ್ಸು ತಾನಾಗಿಯೇ ತಿಳಿಯಾಗುತ್ತದೆ.

**ಸತಾಂ ಸುಖೇ ಚ ದುಃಖೇ ಚ ಸಮಾನೋ ಧೈರ್ಯವಿಕ್ರಮಃ**

**– ಬೃಹತ್ಕಥಾಮಂಜರೀ**

ಸುಖ ದುಃಖಗಳೆರಡರಲ್ಲೂ ಸಜ್ಜನರ ಧೈರ್ಯಸಾಹಸಗಳು ಒಂದೇ ಪ್ರಮಾಣದವು.

**ಸತಾಂ ಹಿ ವಸ್ತುಸಂದೇಹೇ ಬುದ್ಧಿರಭ್ಯುದಯಶ್ರಿಯೇ**

**– ಬೃಹತ್ಕಥಾಮಂಜರೀ**

ಸಜ್ಜನರಿಗೆ ಸಂದೇಹವುಂಟಾದಲ್ಲಿ ಸ್ವಂತ ಬುದ್ಧಿಯು ಏಳಿಗೆಗೆ ಕಾರಣವಾಗುತ್ತದೆ.

**ಸತೀತೇಜೋऽತಿದುಃಸಹಮ್**

– ಬೃಹತ್ಕಥಾಮಂಜರೀ

ಪತಿವ್ರತೆಯರ ತೇಜಸ್ಸು ತಡೆಯಲಸದಳವಾದುದು.

**ಸತೀನಾಂ ದೈವತಂ ಪತಿಃ**

– ಭಾರತಮಂಜರೀ 1.538

ಪತಿವ್ರತೆಯರಿಗೆ ಪತಿಯೇ ದೈವ.

**ಸತ್ತ್ವ ಪ್ರಕಾಶಾತ್ ವಸತಿಃ ಸತಾಂ ಹಿ ದಿವಿ ಶಾಶ್ವತೀ**

– ಬೃಹತ್ಕಥಾಮಂಜರೀ

ಸತ್ತ್ವದ ಪ್ರಕಾಶದಿಂದಾಗಿ ಸಜ್ಜನರಿಗೆ ಸ್ವರ್ಗದಲ್ಲಿ ಸ್ಥಾನವು ಶಾಶ್ವತ.

**ಸತ್ತ್ವಮಹತಾಂ ಶೂರಾಣಾಂ ವಿಜಯಃ ಕರೇ**

– ಬೃಹತ್ಕಥಾಮಂಜರೀ

ಸತ್ತ್ವದಿಂದ ದೊಡ್ಡವರಾದ ಶೂರರಿಗೆ ವಿಜಯವು ಕೈಯಲ್ಲಿಯೇ ಇರುತ್ತದೆ.

**ಸತ್ತ್ವ ಸಾಹಸ ಧೈರ್ಯಾಣಾಂ ಕಿತವಃ ಕ್ಷೇತ್ರಮೇವ ಹಿ**

– ಬೃಹತ್ಕಥಾಮಂಜರೀ

ವಂಚಕರು ಸತ್ತ್ವ–ಸಾಹಸ–ಧೈರ್ಯಗಳ ಆವಾಸಸ್ಥಾನ.

**ಸತ್ಯಂ ತೀರ್ಥತಪೋದಾನಯಜ್ಞೇಭ್ಯೋऽಪಿ ವಿಶಿಷ್ಯತೇ**

– ರಾಮಾಯಣಮಂಜರೀ

ಪುಣ್ಯಕ್ಷೇತ್ರ, ತಪಸ್ಸು, ದಾನ ಮತ್ತು ಯಜ್ಞಗಳಿಗಿಂತ ಸತ್ಯವು ಮಿಗಿಲಾದದ್ದು.

**ಸತ್ಯಂ ಯತ್ ಶೋಕಸಂತಾಪೇ ಹಿಮಶೀತಃ ಚಿತಾನಲಃ**

– ಭಾರತಮಂಜರೀ 1.587

ಶೋಕದ ಸಂತಾಪವುಂಟಾದಾಗ ಚಿತೆಯ ಬೆಂಕಿಯು ಹಿಮದಂತೆ ತಣ್ಣಗೆ ಎಂಬುದು ನಿಜ.

**ಸತ್ಯಂ ವಿತ್ತಂ ಹಿ ಮಾನಿನಾಮ್**

**– ರಾಮಾಯಣಮಂಜರೀ**

ಮಾನವಂತರಿಗೆ ಸತ್ಯವೇ ಸಂಪತ್ತು.

**ಸತ್ಯಂ ವಿಪರೀತಗತಿಃ ಸ್ಮರಃ**

**– ಬೃಹತ್ಕಥಾಮಂಜರೀ**

ಮನ್ಮಥನು ವಿರುದ್ಧ ಗತಿಯುಳ್ಳವನೆಂಬುದೇ ಸತ್ಯ.

**ಸತ್ಯಂ ಸುಹೃದಿ ಶತ್ರೌ ಚ ಶಮಿನಾಂ ಸದೃಶಾ ದೃಶಃ**

**– ಬೃಹತ್ಕಥಾಮಂಜರೀ**

ಶಮೆಯುಳ್ಳವರ ನೋಟಗಳು ಶತ್ರು–ಮಿತ್ರರಿಬ್ಬರಲ್ಲಿಯೂ ಸಮಾನ ವಾಗಿರುತ್ತವೆ.

**ಸತ್ಯಂ ಸ್ಮರವಿದಗ್ಧೇನ ಮುಗ್ಧಃ ಕೋ ನ ವಿಡಂಬಿತಃ ?**

**– ಬೃಹತ್ಕಥಾಮಂಜರೀ**

ಜಾಣನಾದ ಮನ್ಮಥನಿಂದ ನಿಜಕ್ಕೂ ಯಾವ ಮುಗ್ಧನು ತಾನೇ ವಿಡಂಬನೆಗೆ ಒಳಗಾಗಿಲ್ಲ?

**ಸತ್ಯಂ ಹಿ ಧರ್ಮವೃಕ್ಷಸ್ಯ ಮೂಲಂ ಶಾಖಾಸಹಸ್ರಿಣಃ**

**– ಭಾರತಮಂಜರೀ 1.1119**

ಸಾವಿರಾರು ಕೊಂಬೆಗಳುಳ್ಳ ಧರ್ಮವೆಂಬ ಮರಕ್ಕೆ ಸತ್ಯವೇ ಬೇರು.

**ಸತ್ಯವಾಚೋ ಹಿ ಖೇಚರಾಃ**

**– ಬೃಹತ್ಕಥಾಮಂಜರೀ**

ಗಗನಗಾಮಿಗಳು ಸತ್ಯ ನುಡಿಯುವಂತಹವರು.

**ಸತ್ಯಶಾಲಿನ್ಯಃ ಸಂತಿ ಪತಿವ್ರತಾಃ**

**– ಬೃಹತ್ಕಥಾಮಂಜರೀ**

ಪತಿವ್ರತೆಯರು ನಿಜ ಹೇಳುವ ಸ್ವಭಾವದವರಾಗಿರುತ್ತಾರೆ.

**ಸತ್ಯಶೀಲಾಃ ಸ್ವಧರ್ಮಸ್ಥಾಃ ಲಭಂತೇ ನ ಪರಾಭವಮ್**

– ಭಾರತಮಂಜರೀ 13.333

ಸ್ವಧರ್ಮನಿಷ್ಠರಾದ ಸತ್ಯವಂತರು ಸೋಲನ್ನು ಅನುಭವಿಸುವುದಿಲ್ಲ.

**ಸತ್ಯಶೀಲಾ ಹಿ ಸಾಧವಃ**

– ಭಾರತಮಂಜರೀ 7.487

ಸಾಧುಗಳು ಸತ್ಯ ಹೇಳುವ ಸ್ವಭಾವವುಳ್ಳವರು.

**ಸತ್ಯಸಂಪನ್ನಾಃ ಪ್ರಾಪ್ನುವಂತಿ ಸಮೀಹಿತಮ್**

– ಬೃಹತ್ಕಥಾಮಂಜರೀ

ಸತ್ಯವುಳ್ಳವರು ಇಷ್ಟಾರ್ಥವನ್ನು ಪಡೆಯುತ್ತಾರೆ.

**ಸತ್ಸೇವಾ ಹಿ ಮಹಾಫಲಾ**

– ಬೃಹತ್ಕಥಾಮಂಜರೀ

ಸಜ್ಜನರ ಸೇವೆಯು ಮಹತ್ತಾದ ಫಲ ನೀಡುವುದು.

**ಸದಾಚಾರಃ ಶ್ರಿಯೋ ಮೂಲಮ್**

– ರಾಮಾಯಣಮಂಜರೀ

ಸದಾಚಾರವು ಸಂಪತ್ತಿಗೆ ಮೂಲ.

**ಸದಾ ವಿಸದೃಶಾಸಂಗಕಾರಿಣೋ ವಾಚ್ಯತೇ ವಿಧೇಃ**

– ರಾಮಾಯಣಮಂಜರೀ

ವಿಸದೃಶವಾದವುಗಳ ಪರಸ್ಪರಾಸಕ್ತಿಯನ್ನುಂಟು ಮಾಡುವ ವಿಧಾತನು ಸದಾ ನಿಂದನೆಗೆ ಯೋಗ್ಯ.

**ಸದ್ಭಿಃ ಪದಪ್ರಹಾರೋಽಪಿ ವ್ಯಸನಾರ್ತಸ್ಯ ಸಹ್ಯತೇ**

– ರಾಮಾಯಣಮಂಜರೀ

ವ್ಯಸನಕ್ಕೆ ಸಿಲುಕಿದವನ ಕಾಲುಗಳ ಒದೆತವನ್ನೂ ಸಜ್ಜನರು ಸಹಿಸಿಕೊಳ್ಳುತ್ತಾರೆ.

**ಸದ್ಭಕ್ತಿಃ ಪರ್ಯಂತೇ ಹಿ ಪ್ರದೃಶ್ಯತೇ**

– ಬೃಹತ್ಕಥಾಮಂಜರೀ

ಸದ್ಭಕ್ತಿಯು ಕೊನೆಯಲ್ಲಿ ಮಾತ್ರ ಕಂಡುಬರುತ್ತದೆ.

**ಸಂತಃ ಪ್ರಣಯಭಂಗೇಷು ಭೀತಾನಾಂ ನಹಿ ಶಿಕ್ಷಿತಾಃ**

– ಬೃಹತ್ಕಥಾಮಂಜರೀ

ಪ್ರೀತಿಗೆ ಭಂಗವುಂಟಾದಲ್ಲಿಯೂ ಸಜ್ಜನರು ಭಯವನ್ನು ಕಲಿತಿರುವುದಿಲ್ಲ.

**ಸನ್ಮಂತ್ರಿಣೋ ಹಿ ಭೂಪಾನಾಂ ಶ್ರೀರಕ್ಷಾಪರಿಖಾಚಲಾಃ**

– ಬೃಹತ್ಕಥಾಮಂಜರೀ

ಒಳ್ಳೆಯ ಮಂತ್ರಿಗಳೇ ರಾಜರ ಸಂಪತ್ತನ್ನು ಕಾಪಾಡುವ ಶಾಶ್ವತ ಕಂದಕಗಳು.

**ಸಭಾ ಭಾತಿ ಚ ಸಜ್ಜನೈಃ**

– ಬೃಹತ್ಕಥಾಮಂಜರೀ

ಸಭೆಯು ಸಜ್ಜನರಿಂದ ಕಂಗೊಳಿಸುತ್ತದೆ.

**ಸಮಾನ ದುಃಖಸಂಗೇನ ಬಾಷ್ಪಗ್ರಂಥಿರ್ಹಿ ಭಿದ್ಯತೇ**

– ಬೃಹತ್ಕಥಾಮಂಜರೀ

ಸಮಾನ ದುಃಖದವರ ಸಮಾಗಮದಿಂದ ಕಣ್ಣೀರಗ್ರಂಥಿಯು ಒಡೆದು ಹೋಗುತ್ತದೆ.

**ಸರ್ವತ್ರ ವಿವೃತದ್ವಾರಾ ದೈವಶಕ್ತಿರ್ಗರೀಯಸೀ**

– ರಾಮಾಯಣಮಂಜರೀ

ಎಲ್ಲೆಡೆ ತೆರೆದ ಬಾಗಿಲುಳ್ಳ ದೈವದ ಶಕ್ತಿಯು ಹೆಚ್ಚಿನದು.

**ಸರ್ವಥಾ ಖಲವಾಕ್ಯೇಷು ಸ್ತ್ರಿಯೋ ಮೂರ್ಖಾಶ್ಚ ಸಾದರಾಃ**

– ರಾಮಾಯಣಮಂಜರೀ

ಹೆಂಗಸರೂ ಮತ್ತು ಮೂರ್ಖರೂ ದುಷ್ಟರ ಮಾತುಗಳಲ್ಲಿ ನಿಶ್ಚಯವಾಗಿಯೂ ಆದರವುಳ್ಳವರಾಗಿರುತ್ತಾರೆ.

**ಸರ್ವಥಾ ದೈವಲಿಖಿತಂ ಪ್ರಮಾಷ್ಟುಂ ಕಸ್ಯ ಕಃ ಕ್ಷಮಃ ?**

– ಬೃಹತ್ಕಥಾಮಂಜರೀ

ಯಾರ ಹಣೆಬರಹವನ್ನು ಯಾರು ತಾನೇ ಅಳಿಸಿಹಾಕಬಲ್ಲರು?

**ಸಹಜೈವಾಭಿಲಾಷೇಷು ಜಂತೂನಾಂ ಜನ್ಮವಾಸನಾ**

– ರಾಮಾಯಣಮಂಜರೀ

ಪ್ರಾಣಿಗಳಿಗೆ ಆಸೆಗಳ ಬಗ್ಗೆ ಜನ್ಮದ ವಾಸನಾಸಂಸ್ಕಾರವು ಸಹಜವಾದುದು.

**ಸಹಸಾಪಾತಿನಾ ದೀಪಃ ಪತಂಗೇನಾಪಿ ಹನ್ಯತೇ**

– ರಾಮಾಯಣಮಂಜರೀ

ಇದ್ದಕ್ಕಿದ್ದಂತೆ ಎರಗಿದ ಬೆಂಕಿಯ ಹುಳುವೂ ದೀಪವನ್ನು ನಾಶ ಗೊಳಿಸಬಲ್ಲದು.

**ಸಹಸಾ ಪ್ರಿಯವಿಚ್ಛೇದಂ ವಜ್ರಪಾತಂ ಸಹೇತ ಕಃ ?**

– ಬೃಹತ್ಕಥಾಮಂಜರೀ

ಇದ್ದಕ್ಕಿದ್ದಂತೆ ಉಂಟಾದ ಪ್ರಿಯರ ವಿಯೋಗವೆಂಬ ವಜ್ರಾಯುಧದ ಪೆಟ್ಟನ್ನು ಸಹಿಸಬಲ್ಲವರಾರು?

**ಸಹಸ್ಯೆವ ವಿನಶ್ಯಂತಿ ದರ್ಪಾದ್ ವಿದ್ಯಾಃ ಶ್ರಿಯೋ ಯಥಾ**

– ಭಾರತಮಂಜರೀ 3.941

ದರ್ಪದಿಂದ ಐಶ್ವರ್ಯವೆಂಬಂತೆ, ವಿದ್ಯೆಗಳೂ ಸಹ ಕೂಡಲೇ ನಾಶವಾಗಿ ಬಿಡುತ್ತವೆ.

**ಸಹಾಮಹೇ ಕಥಂ ನಾಮ ತೃಣಾರ್ಥೇ ರತ್ನವಿಕ್ರಯಮ್**

– ಬೃಹತ್ಕಥಾಮಂಜರೀ

ಹುಲ್ಲಿಗಾಗಿ ರತ್ನವನ್ನು ಮಾರಾಟ ಮಾಡುವುದನ್ನು ಹೇಗೆ ತಾನೇ ಸಹಿಸಿ ಕೊಳ್ಳೋಣ ?

**ಸಾದರಾಃ ಸಾಪರಾಧೇಽಪಿ ಗುಣಲುಬ್ಧಾ ಹಿ ಸಾಧವಃ**

– ರಾಮಾಯಣಮಂಜರೀ

ಗುಣಗಳನ್ನು ಅತಿ ಪ್ರೀತಿಸುವ ಸಾಧುಗಳು ಅಪರಾಧಿಗಳಲ್ಲೂ ಆದರವುಳ್ಳವ ರಾಗಿರುತ್ತಾರೆ.

**ಸಾಧುಭ್ರಾಂತ್ಯಾ ಹಿ ಮುಷ್ಣಂತಿ ಧೂರ್ತಾಃ ಸರಲವಂಚಕಾಃ**

– ಬೃಹತ್ಕಥಾಮಂಜರೀ

ಧೂರ್ತರು ಸಾಧುಗಳ ಭ್ರಾಂತಿಯುಂಟು ಮಾಡಿ ಸುಲಭವಾಗಿ ಮೋಸ ಮಾಡಿ ಕದಿಯುತ್ತಾರೆ.

**ಸಾಧೂನಾಂ ಕೋಪೋ ಹಿ ವಿನಯಾವಧಿಃ**

– ಭಾರತಮಂಜರೀ 1.320

ಸಾಧುಗಳ ಕೋಪವು ವಿನಯವನ್ನು ತೋರಿಸುವವರೆಗಷ್ಟೆ.

**ಸಾಧೂನಾಂ ಮರಣಂ ಶ್ರೇಯಃ ನ ಮಾತಃ ಸತ್ಯವಿಪ್ಲವಃ**

– ಭಾರತಮಂಜರೀ 1.463

ಸಾಧುಗಳಿಗೆ ಮರಣವು ಶ್ರೇಯಸ್ಕರವೇ ಹೊರತು ಸತ್ಯವನ್ನು ಮೀರುವುದಲ್ಲಮ್ಮ!

**ಸಾಧ್ವೀಚರಿತ್ರೈಃ ಸುಖ್ಯತೇ ಚ ಸತೀಮನಃ**

– ಬೃಹತ್ಕಥಾಮಂಜರೀ

ಪತಿವ್ರತೆಯರ ಮನಸ್ಸು ಸಾಧ್ವಿಯರ ಕಥೆಗಳಿಂದ ಹರ್ಷಿಸುತ್ತದೆ.

**ಸಾಪಕಾರೇಽಪಿ ವೀರಾಣಾಂ ನಹಿ ಭೀತೇ ಪರಾಕ್ರಮಃ**

– ಬೃಹತ್ಕಥಾಮಂಜರೀ

ಅಪಕಾರ ಮಾಡಿದ್ದರೂ ಹೆದರಿದವರಲ್ಲಿ ವೀರರು ಪರಾಕ್ರಮವೆಸಗರು.

**ಸಾಮಸಾಧ್ಯೇಽರ್ಥೇ ನ ದಂಡಃ ಸದ್ಭಿರಿಷ್ಯತೇ**

– ಭಾರತಮಂಜರೀ 5.10

ಒಳ್ಳೆಯ ಮಾತಿನಿಂದಲೇ ಕೆಲಸವಾಗುವ ಸಂದರ್ಭದಲ್ಲಿ ಸಜ್ಜನರು ದಂಡೋಪಾಯವನ್ನು ಆಶ್ರಯಿಸುವುದಿಲ್ಲ.

**ಸಾವಲೇಪಂ ವಚಃ ಶ್ರುತ್ವಾ ನ ಸಹಂತೇ ಹಿ ಮಾನಿನಃ**

– ಭಾರತಮಂಜರೀ 10.21

ಮಾನವಂತರು ಅವಮಾನಿಸುವ ಮಾತನ್ನು ಕೇಳಿ ಸಹಿಸಿಕೊಳ್ಳುವುದಿಲ್ಲ.

**ಸಿಂಹಾಃ ಸಂತಿ ಗಜೇಂದ್ರಾಣಾಂ ಶರಭಾಶ್ಚ ಗಜದ್ವಿಷಾಮ್**

– ಭಾರತಮಂಜರೀ 2.88

ಮದ್ದಾನೆಗಳಿಗೆ ಬಲಿ ಹಾಕಲು ಸಿಂಹಗಳಿವೆ ; ಸಿಂಹಗಳಿಗೆ ಶರಭಗಳೂ ಇವೆ.

**ಸಿಕತಾಮುಷ್ಟಿಭಿಃ ಸೇತುಃ ಕಥಂ ನಾಮ ನಿಬಧ್ಯತೇ**

– ಭಾರತಮಂಜರೀ 3.938

ಮರಳ ಮುಷ್ಟಿಗಳಿಂದ ಸೇತುವೆಯನ್ನು ಕಟ್ಟಲು ಹೇಗೆ ಸಾಧ್ಯ?

**ಸಿದ್ಧಿಃ ಸತ್ತ್ವವತಾಮೇವ**

– ಬೃಹತ್ಕಥಾಮಂಜರೀ

ಸತ್ತ್ವಶಾಲಿಗಳಿಗೇ ಸಿದ್ಧಿಯು ದೊರಕುವುದು.

**ಸುಕಾಲೇ ವಿಹಿತಂ ಸರ್ವಂ ಅಯತ್ನೇನೈವ ಸಿಧ್ಯತಿ**

– ಬೃಹತ್ಕಥಾಮಂಜರೀ

ಸರಿಯಾದ ಸಮಯದಲ್ಲಿ ಕೈಗೊಂಡ ಕೆಲಸಗಳೆಲ್ಲವೂ ಪ್ರಯತ್ನವಿಲ್ಲದೆಯೇ ಸಿದ್ಧಿಸುತ್ತವೆ.

**ಸೂಕ್ಷ್ಮಾ ಧರ್ಮಸ್ಯ ಗತಯೋ ಜ್ಞಾಯಂತೇ ನಹಿ ಹೇಲಯಾ**

– ಭಾರತಮಂಜರೀ 3.1467

ಧರ್ಮದ ರೀತಿನೀತಿಗಳು ಸೂಕ್ಷ್ಮವಾದವು. ಅವು ಅಷ್ಟು ಸುಲಭವಾಗಿ ಅರ್ಥವಾಗುವಂಥವಲ್ಲ.

**ಸೇವಾ ಹಿ ಪ್ರಾಣವಿಕ್ರಯಃ**

– ಬೃಹತ್ಕಥಾಮಂಜರೀ

ಸೇವೆಯೆಂಬುದು ಪ್ರಾಣದ ಮಾರಾಟ.

**ಸೋತ್ಪ್ರಾಸಾ ವೈರಿಣಾಂ ವಾಚೋ ನ ಸಹಂತೇ ಹಿ ಮಾನಿನಃ**

– ಭಾರತಮಂಜರೀ 4.355

ಮಾನವಂತರು ಶತ್ರುಗಳ ಪ್ರೀತಿಭರಿತ ಮಾತುಗಳನ್ನು ಸಹಿಸುವುದಿಲ್ಲ.

**ಸೋತ್ಸಾಹಧೈರ್ಯಾಣಾಂ ಸ್ವಯಂ ಸಿದ್ಧಿಃ ಪ್ರಜಾಯತೇ**

– ಬೃಹತ್ಕಥಾಮಂಜರೀ

ಧೈರ್ಯ ಉತ್ಸಾಹಗಳುಳ್ಳವರಿಗೆ ಸಿದ್ಧಿಯು ತಾನಾಗಿಯೇ ಉಂಟಾಗುತ್ತದೆ.

**ಸೋತ್ಸಾಹೈಃ ಪ್ರಾಪ್ಯತೇ ಲಕ್ಷ್ಮೀಃ ನ ಕ್ಲೀಬೈರ್ನ ವಿಷಾದಿಭಿಃ**

– ಭಾರತಮಂಜರೀ 3.1693

ಉತ್ಸಾಹಶಾಲಿಗಳಿಗೆ ಸಂಪತ್ತು ಲಭಿಸುತ್ತದೆ; ನಪುಂಸಕರಿಗೂ ಅಲ್ಲ, ದುಃಖಿತರಿಗೂ ಅಲ್ಲ.

**ಸೌಭಾಗ್ಯಮತ್ತಾ ಮಾನಿನ್ಯೋ ನ ಸಹಂತೇ ಚ ಧೀರಣಾಮ್**

– ಬೃಹತ್ಕಥಾಮಂಜರೀ

ಸೌಭಾಗ್ಯದಿಂದ ಕೊಬ್ಬಿರುವ ಮಾನಿನಿಯರು ತಿರಸ್ಕಾರವನ್ನು ಸಹಿಸಿಕೊಳ್ಳುವುದಿಲ್ಲ.

**ಸ್ತ್ರಿಯಃ ಕುಟಿಲಚಾರಿಣ್ಯಃ ಪ್ರಣಯಸ್ಯ ನ ಭಾಜನಮ್**

– ರಾಮಾಯಣಮಂಜರೀ

ಕುಟಿಲಕಾರ್ಯಾಚರಣೆಯುಳ್ಳ ಹೆಂಗಸರು ಪ್ರೀತಿಗೆ ಪಾತ್ರರಲ್ಲ.

**ಸ್ತ್ರೀಣಾಂ ಸ್ಪರ್ಶೇಷು ಯಾ ಪ್ರೀತಿಃ ಸಾ ಪುಂಭಿಃ ಲಭ್ಯತೇ ಕುತಃ ?**

– ಭಾರತಮಂಜರೀ 13.1337

ಸ್ಪರ್ಶಸುಖದಲ್ಲಿ ಸ್ತ್ರೀಯರಿಗೆ ಯಾವ ಪ್ರೀತಿಯುಂಟೋ ಅದು ಗಂಡಸರಿಗೆ ಹೇಗೆ ದೊರಕೀತು?

**ಸ್ತ್ರೀ ನ ವಧ್ಯಾ**

– ಬೃಹತ್ಕಥಾಮಂಜರೀ

ಹೆಂಗಸನ್ನು ಕೊಲ್ಲಬಾರದು.

**ಸ್ತ್ರೀಮತಿಃ ಸ್ವಪ್ನಮಾಯೇವ ನಾಪ್ರಬುದ್ಧೈಃ ವಿಚಾರ್ಯತೇ**

– ಬೃಹತ್ಕಥಾಮಂಜರೀ

ಹೆಂಗಸರ ಬುದ್ಧಿಯು ಕನಸಿನ ಮಾಯೆಯಂತೆ; ಅಲ್ಪಜ್ಞರು ಅದನ್ನು ವಿಮರ್ಶಿಸಲಾರರು.

**ಸ್ತ್ರೀಸಖಸ್ಯ ವನೇ ವಾಸಃ ಲೋಕೇ ಲಜ್ಜಾಕರಃ ಪರಮ್**

– ರಾಮಾಯಣಮಂಜರೀ

ಹೆಂಗಸರ ಗೆಳೆಯನು ಕಾಡಿನಲ್ಲಿರುವುದು ಲೋಕದಲ್ಲಿ ದೊಡ್ಡ ಅವಮಾನವೇ ಸರಿ.

**ಸ್ನೇಹಜನ್ಮನಿ ಸಂಸಾರೇ ಕಿಂ ದುಃಖಾದಪರಂ ಫಲಮ್**

– ಭಾರತಮಂಜರೀ 3.962

ಸ್ನೇಹಕ್ಕೆ ಕಾರಣವಾದ ಈ ಪ್ರಪಂಚದಲ್ಲಿ ದುಃಖಕ್ಕಿಂತ ಬೇರೆ ಫಲ ಯಾವುದಿದೆ ?

**ಸ್ನೇಹ ವಾತ್ಸಲ್ಯರಾಗಾಣಾಂ ಲಲನಾ ಏವ ಮಂದಿರಮ್**

– ಭಾರತಮಂಜರೀ 13.1335

ಸ್ನೇಹ ವಾತ್ಸಲ್ಯ ಅನುರಾಗಗಳಿಗೆ ಹೆಂಗಸರೇ ನೆಲೆಮನೆ.

**ಸ್ಮರಜ್ವರ ಚಿಕಿತ್ಸಾ ಹಿ ದಯಿತಾಲಿಂಗನಾಮೃತೈಃ**

– ಬೃಹತ್ಕಥಾಮಂಜರೀ

ಪ್ರಿಯತಮೆಯ ಅಪ್ಪುಗೆಯ ಅಮೃತವೇ ಮನ್ಮಥ ಜ್ವರಕ್ಕೆ ಚಿಕಿತ್ಸೆಯಲ್ಲವೇ!

**ಸ್ಮರೋ ಹಿ ಜ್ಞಾನಲೋಚನಃ**

– ಬೃಹತ್ಕಥಾಮಂಜರೀ

ಮನ್ಮಥನಿಗೆ ಜ್ಞಾನವೇ ಕಣ್ಣು.

**ಸ್ಮೇರಚಾಮರಹಾಸಿನ್ಯಃ ವಲ್ಲಭಾಃ ಕಸ್ಯ ನ ಶ್ರಿಯಃ**

– ಭಾರತಮಂಜರೀ 3.7

ಮುಗುಳುನಗೆಯನ್ನು ಹೊರಸೂಸುವ ಸಂಪತ್ತು ಯಾರಿಗೆ ತಾನೇ ಇಷ್ಟ ವಾಗುವುದಿಲ್ಲ.

**ಸ್ವಕರ್ಮಮುದ್ರಿತೋ ಲೋಕಃ ಕಃ ಕಸ್ಮೈ ಕಿಂ ಪ್ರಯಚ್ಛತಿ ?**

– ಬೃಹತ್ಕಥಾಮಂಜರೀ

ಜನರೆಲ್ಲರೂ ತಂತಮ್ಮ ಕರ್ಮದಿಂದ ಕಟ್ಟಿಹಾಕಲ್ಪಟ್ಟವರು; ಯಾರು ಯಾರಿಗೆ ಏನು ಕೊಟ್ಟಾರು?

**ಸ್ವಗುಣೈಃ ಪಾತ್ರತಾಂ ನೀತಾಃ ಕಿಂ ನಾರ್ಹಂತಿ ಹಿ ಸಾಧವಃ**

**– ರಾಮಾಯಣಮಂಜರೀ**

ತಮ್ಮ ಗುಣಗಳಿಂದಾಗಿ ಸತ್ಪಾತ್ರರಾದ ಸಾಧುಗಳು ಏತಕ್ಕೆ ತಾನೇ ಅರ್ಹರಲ್ಲ?

**ಸ್ವಜನಸ್ನೇಹಹಾರಿಣ್ಯಃ ಕರ್ಕಶಾ ಹಿ ವಿಭೂತಯಃ**

**– ರಾಮಾಯಣಮಂಜರೀ**

ತಮ್ಮ ಜನರ ಸ್ನೇಹವನ್ನೇ ಕಸಿದುಕೊಳ್ಳುವ ಸಂಪತ್ತುಗಳು ಕಠೋರವಾದವು.

**ಸ್ವಜಾತಿರ್ದುರತಿಕ್ರಮಃ**

**– ಬೃಹತ್ಕಥಾಮಂಜರೀ**

ತಮ್ಮ ಜಾತಿಯನ್ನು ಮೀರಿರುವುದು ಕಷ್ಟ.

**ಸ್ವಪ್ನಮಾಯಾವಿಲಸಿತಂ ನ ಹ್ಯಸುಪ್ತಃ ಪ್ರಪಶ್ಯತಿ**

**– ಭಾರತಮಂಜರೀ 3.1680**

ಕನಸಿನ ಮಾಯೆಯ ಆಟವನ್ನು ನಿದ್ರಿಸದವನು ನೋಡಲಾರನು.

**ಸ್ವಭಾವ ಏವ ಮಹತಾಂ ಪರಕಾರ್ಯಾರ್ಥಮುದ್ಯಮಃ**

**– ರಾಮಾಯಣಮಂಜರೀ**

ಇನ್ನೊಬ್ಬರಿಗಾಗಿ ಪ್ರಯತ್ನಶೀಲರಾಗಿರುವುದು ಮಹಾತ್ಮರ ಸ್ವಭಾವವೇ ಸರಿ.

**ಸ್ವಸ್ಥೇ ಚಿತ್ತೇ ಹಿ ನಿಷ್ಪತ್ತಿಃ ಕಾರ್ಯಾಣಾಮುಪಜಾಯತೇ**

**– ರಾಮಾಯಣಮಂಜರೀ**

ಮನಸ್ಸು ಸಮಾಧಾನದಿಂದಿದ್ದರೆ ಎಲ್ಲ ಕಾರ್ಯಗಳೂ ಸುಸಂಪನ್ನವಾಗುತ್ತವೆ.

**ಸ್ವಾಧೀನಾ ನಹಿ ಕನ್ಯಕಾಃ**

**– ಬೃಹತ್ಕಥಾಮಂಜರೀ**

ಹೆಣ್ಣುಮಕ್ಕಳು ಸ್ವತಂತ್ರರಲ್ಲ.

**ಸ್ವಾಮಿನೋ ವ್ಯಪದೇಶೇನ ಸುಖಮಿತ್ಯಶ್ನುತೇ ಜನಃ**

**– ಬೃಹತ್ಕಥಾಮಂಜರೀ**

ಒಡೆಯರ ಹೆಸರಿನಲ್ಲಿ ಜನರು ಸುಖವೆಂಬುದನ್ನು ಪಡೆಯುತ್ತಾರೆ.

**ಸ್ವಾರ್ಥಸಿದ್ಧ್ಯೈ ಸತಾಂ ಧಿಯಃ**

– ಬೃಹತ್ಕಥಾಮಂಜರೀ

ಸಜ್ಜನರ ಬುದ್ಧಿಯು ಇಷ್ಟಾರ್ಥ ಸಾಧನಕ್ಕೆ.

**ಸ್ವೀಕೃತೇ ಕೋ ಹಿ ಸಹತೇ ವೀರೋ ನ್ಯಕ್ಕಾರಮಾತ್ಮನಃ ?**

– ಬೃಹತ್ಕಥಾಮಂಜರೀ

ಬಂಧನದಲ್ಲಿ ಯಾವ ವೀರನು ತಾನೇ ತನ್ನ ತಿರಸ್ಕಾರವನ್ನು ಸಹಿಸಿಕೊಂಡಾನು?

**ಹರಿಣೋ ಜನನೀಂ ವೇತ್ತಿ ನಹಿ ವ್ಯಾಘ್ರೋ ಮೃಗಾಶನಃ**

– ರಾಮಾಯಣಮಂಜರೀ

ಜಿಂಕೆಯು ತಾಯಿಯನ್ನು ತಿಳಿಯುತ್ತದೆ ; ಆದರೆ ಜಿಂಕೆಯನ್ನು ತಿನ್ನುವ ಹುಲಿಯು ಅಲ್ಲ.

**ಹಿತ್ವಾ ದಿಕ್ಷು ಕ್ಷಿಪೇತ್ ಕೋ ನು ಕಂಠಸ್ಥಾಂ ರತ್ನಮಾಲಿಕಾಮ್?**

– ಬೃಹತ್ಕಥಾಮಂಜರೀ

ಯಾರಾದರೂ ಕೊರಳಿನಲ್ಲಿರುವ ರತ್ನಹಾರವನ್ನು ಕಿತ್ತು ದಿಕ್ಕಾಪಾಲಾಗಿ ಬಿಸಾಡುವರೇನು?

**ಹೃದಯೇ ಶಲ್ಯಮಾದತ್ತೇ ಪ್ರತಿಶ್ರುತಿ ವಿಪರ್ಯಯಃ**

– ರಾಮಾಯಣಮಂಜರೀ

ಮಾತುಕೊಟ್ಟು ವ್ಯತಿರಿಕ್ತವಾಗಿ ನಡೆದುಕೊಳ್ಳುವುದು ಹೃದಯಕ್ಕೆ ಶೂಲವನ್ನು ಇರಿಯುತ್ತದೆ.

**ಹೇಲಾವಿಶೃಂಖಲೋ ವೇಷಃ ತೋಷಾಯ ಪ್ರಭುಚೇತಸಾಮ್**

– ಭಾರತಮಂಜರೀ 3.285

ಆಟದ ವಿಚಿತ್ರ ವೇಷಗಳೆಲ್ಲವೂ ಪ್ರಭುಗಳ ಚಿತ್ತವನ್ನು ಸಂತಸಗೊಳಿಸುವುದಕ್ಕಾಗಿ.

— ★ —